# ಅನುರಾಗಿ

## ೧

ಕಾಂತ—ಈ ಕಥೆಯ ನಿರ್ಮಲ ಪ್ರಿಯ. ಅವನ ಚರಿತ್ರೆಯನ್ನೇ ಇಲ್ಲಿ ಬರಿಯುತ್ತಿರುವುದು. ಈ ಕಥೆ ಸಾಧಾರಣ ಕಥೆಯಲ್ಲ. ಅವನ ಪ್ರೇಮದ ಕಾಂತಾರದ ಕಥೆಯೆ. ಅವನು ವರ್ಧಿಷ್ಣುಲೇಖಕ. ಉತ್ತಮ ತರಗತಿಯ ಲೇಖಕನೆಂದು ಹೇಳಿಕೊಳ್ಳುತ್ತಿರಲಿಲ್ಲ. ಅವನ ಬರಹವನ್ನು ಓದಿದವರು, ಹೃದಯವನ್ನು ಅರಿತಿದ್ದವರು ಮತ್ತು ಕಣ್ಣೀರುಮಿಡಿವವರು ಉತ್ತಮ ಲೇಖಕನೆಂದು ಅವನ ಕಡೆಗೆ ಕೈತೋರುತ್ತಿದ್ದರು.

ಕಾಂತ ಕಾರುಣ್ಯಕಂಡಿದ್ದ. ಕಾರ್ಮುಗಿಲ ಕಡೆಗೂ ದೃಷ್ಟಿ ಹರಿಸಿದ್ದ. ಜೀವಮಾನದ ಕಾಲತ್ರಯ, ಕಾಲಧರ್ಮ, ಕಾಲಪಕ್ವ ತಿಳಿದಿದ್ದ. ಅವನು ಬರೆದ ಅನೇಕ ಕಥೆ—ಬರಹಗಳು ಹೆಣ್ಣು ಗಂಡಿನ ಒಲವನ್ನು ಕುರಿತು ರಚಿಸಿದವುಗಳಾಗಿದ್ದವು. ಹೆಣ್ಣು-ಗಂಡು, ಗಲ್ಲಗಲ್ಲ ಹಚ್ಚಿಕೂತು, ಉಸಿರ ಮೇಲುಸಿರಿನಲ್ಲಿ ಕನಸನೂರನ್ನು ಕಂಡ ಬಗೆಯಾಗಿದ್ದವು. ಪ್ರೇಮಿಗಳ ಹೃದಯವಾಸವನ್ನು, ಅರಹುಚ್ಚನ್ನು ಅವನು ಬರೆದಿದ್ದ. ಪ್ರೀತಿ ಹೃದಯಗಳ ನಿಟ್ಟುಸಿರಿನ ತುದಿಯಲ್ಲಿ ಉಳಿದು, ಒಳ ಉಸಿರಿನ ಒರೆಯಲ್ಲಿ ಶಕ್ತಿ-ಭಕ್ತಿಯನ್ನು ಕಂಡ ಬಗೆಯನ್ನು ವಿವರಿಸಿದ್ದ.

ಜೀವವೊಂದು ರತ್ನದೀಪ. ಅದು ಪ್ರಾಣದೀಪ. ದೀಪ ಕರುಣೆಯ ಕಣ್ಣು. ಜೀವದ ಸಂತಾಪವೇ ಪ್ರೇಮ. ಕರುಣೆಯ ಕಣ್ಣನ್ನು, ಅನಂತ ಪ್ರಣಯವನ್ನು; ಮಿಲನದ ಚಿಹ್ನೆಯನ್ನು, ಹೃದಯಪಂಜರದಲ್ಲಿ ಆಡುವ ಗಿಳಿಗಳ ಬಣ್ಣದಾಟವನ್ನು, ಮುಗ್ಧೆಯರ ದುಂಡುಮೊಗ, ಮುದ್ದುಂಡ ಮೊಗವನ್ನು ಬಹಳವಾಗಿ ಬರಹದಲ್ಲಿ ರೂಪಿಸಿದ್ದ.

ಕಾಂತ ಮಧುರಮೋಹನ. ಪ್ರೇಮದಾಟದ ಅಮಲಮೈತ್ರಿಯನ್ನು, ವಿರಹಿಗಳ ಕಣ್ಣೀರಿನ ಪುಣ್ಯಾಭಿಷೇಕವನ್ನು; ಒಕ್ಕೂಟವನ್ನು ಲಲಿತವಾಗಿ ಹೂಮಳೆಕರೆಯುವಂತೆ ತನ್ನ ಮುದ್ದಾದ ಬರಹದಲ್ಲಿ ತುಂಬಿದ್ದ. ಅವನು

ಬಣ್ಣದ ಮಾತು ಬಹಳ ಬರೆದಿದ್ದುದು ನಿಜ. ಅವನ ಕಥೆಯಲ್ಲಿ ಬಹಳ ಬಣ್ಣದ ಮಾತುಗಳು ಕೂಡಿಕೊಂಡಿದ್ದವು. ಇನ್ನು ಅವನು ಬರೆದು ಮುಗಿಸಿದ ಕಥೆಯವಿಚಾರ ಬೇಡ. ಕಾಂತನ ಸ್ವಂತ ಕಥೆಯ ಕಡೆ ತಿರುಗೋಣ.

ಕಥೆಗಾರಕಾಂತ ಅಷ್ಟು ಕಲಿತವನಲ್ಲ. "ಒಲವೆ ನಮ್ಮ ಬದುಕು, ಪ್ರೇಮವೇ ನಮ್ಮ ರಂಗಸಾಲೆ, ನಾವೇ ಚಂದ್ರಕೀಚಂದ್ರಮರು" ಎಂದು ಸಾಧಾರಣವಾಗಿ ಆಡಿಕೊಳ್ಳುವವರ ಗುಂಪಿನವ. ಅವನ ಅಕ್ಷರದಲ್ಲಿ, ಬರಹದಲ್ಲಿ ನಿಜವಾಗಿ ಮಂತ್ರಶಕ್ತಿ ಅಡಗಿತ್ತು. ಬರಹದಲ್ಲಿ ಹೆಚ್ಚಾಗಿ ಪ್ರೇಮಮಂಗಲ ಸಮಾರಂಭದ ಬಂಗಾರದ ಬೆಳಕು ಕಾಣುತ್ತಿತ್ತು. "ಹೆಣ್ಣು ಕಾಮದ ಕೈಗೊಂಬೆಯಲ್ಲ. ಹೆಣ್ಣು ಜಗತ್ತಿನ ತಾಯಿ. ಹೆಣ್ಣನ್ನು ಪಾಶವ ವೃತ್ತಿಗೆ ಎಳೆದೊಯ್ಯಲಾಗದು, ಜಗತ್ತಿನ ತಾಯಿಯನ್ನು ಅಧೋಗತಿಗೆ ಎಳೆದು ತರುವುದು ಧರ್ಮವಲ್ಲ." ಎಂದು, ಇತರ ಸ್ವಾತಂತ್ರ್ಯಜನರು ಅಭಿಪ್ರಾಯಪಟ್ಟಂತೆ ತಾನೂ ಬರಹದಲ್ಲಿ ಎತ್ತಿತೋರಿ ಜನರಿಗೆ ವಿವೇಕ ಹೇಳಿದ್ದ. ಅವನ ಕಣ್ಣು, ಒಳಹೃದಯವನ್ನು, ಸತ್ಯವನ್ನು ಕಂಡಿತ್ತು. ಜೀವನದಲ್ಲಿ ಸದುಪಯೋಗ ಕಾಣಬೇಕೆಂದು ಅವನು ಬಯಸಿದ್ದ. ಬಾಳನ್ನು ಸಮದೃಷ್ಟಿಯಲ್ಲಿ ಕಾಣಬೇಕೆಂದು ಅವನ ಹೆಬ್ಬಯಕೆಯಾಗಿತ್ತು.

ದಿವಿಜಪುರ. ಕಾಂತನ ಊರು ದಿವಿಜಪುರ. ದಿವಿಜಪುರವಾಸಿಕಾಂತ, ತನ್ನ ಊರು ಇಂದ್ರನ ರಾಜಧಾನಿಯಾಗಿತ್ತೆಂದು ಹೆಮ್ಮೆಪಡುತ್ತಿದ್ದ. ಪೌರಾಣಿಕಮಾತು ಬೇಡ. ದಿವಿಜಪುರದಲ್ಲಿ ಲೇಖಕಕಾಂತ ದಿವೋದಾಸ ನಾಗಿದ್ದುದು ದಿಟ. ಅವನ ದಿವಿಜಾಂಗನೆ, ಅಪ್ಸರೆ, ಸುಧಾಪೂರ್ಣೆ ಒಬ್ಬಳಿದ್ದಳು. ಅವಳೇ ಅಲಕಾಯೆಂಬ ಮುಗುದೆ. ಲೇಖಕನ ನಾಲ್ಕೂ ಸುತ್ತಿನ ಜಾಗ, ದಿವ್ಯಸ್ವರ್ಗ, ಬಹುದೂರದ ಬದುಕಿನ ಕಿರಣವಾಗಿ, ಅಲಕಾ ಕಾಂತನ ಪ್ರೇಮದಕಣ್ಣಾಗಿದ್ದಳು. ದಿವೋದಾಸಕಾಂತ, ಕಾರುಣ್ಯಮಯಿ ಅಲಕಾನಾಗರಮಣಿಯ ಕಣ್ಸನ್ನೆಯಲ್ಲಿ ಹಣೆಯುತ್ತಿದ್ದ ತಾನು ಜಾಲಕಥೆ. ನಿದ್ದೆಗಡಲಿನಲ್ಲಿ ಮುಳುಗಿ, ತನ್ಮಯನಾಗಿ ಬರಹ ರಣರಂಗಮುಗಿಸಿದ ಮೇಲೆ, ಮನದನ್ನೆಯಾಗಿದ್ದವಳೊಂದಿಗೆ ನಲಿಯುತ್ತಿದ್ದ. ಬೇಸರಲೇಖಣಿಯ ನೋವನ್ನು ಮರೆಯುತ್ತಿದ್ದ. ಪ್ರೇಮದ ಆಟಪಾಟ, ನೋಟಕೂಟ ಕವಿಗೆ ಸ್ಫೂರ್ತಿತರುವುದಲ್ಲವೆ?

ದಿವಿಜಪುರದಲ್ಲಿ ಆ ದಿವ್ಯನೆಲೆಯಲ್ಲಿ, ಬಳ್ಳಿಯಂತೆ ಸುತ್ತಿಹರಿಯುತ್ತಿದ್ದ ನದಿಯಿತ್ತು. ಲೇಖಕ, ತಾನು ಕಥೆ-ಕಾದಂಬರಿಗಳಲ್ಲಿ ಸೃಷ್ಟಿಸಿ ಹೆಣೆಯುತ್ತಿದ್ದ ವಸ್ತುವ್ಯಕ್ತಿಗಳನ್ನು ಈ ನದಿಯ ಹತ್ತಿರವೇ ಕುಳಿತು ನೆನೆಯುತ್ತಾ ಬರೆಯು ತ್ತಿದ್ದುದು. ಅವನ ಬರಹದಲ್ಲಿ ಕಾಣಿಸಿಕೊಂಡಿದ್ದ. ಇಂದ್ರಾಣಿ, ಕೌಮಾರಿ, ಮಧುರೀಲತಾ, ಮೃಣಾಲಿನಿ ಈ ಚಿತ್ತಾಪಹಾರಿಣಿಯರು ನದಿಯ ಬಳಿಯೇ ಅವನಿಗೆ ಕಾಣಿಸಿಕೊಂಡಿದುದು.

ಉಪವನ, ವೃಕ್ಷವಾಟಿಕೆ; ಸುರಸುಂದರಿಯರು, ಕೂಡುವ ಓಡಾಡುವ ಸ್ಥಳವೆಂದು ಕಾಂತ ಎಷ್ಟೋ ಬರೆದಿದ್ದ. ದಿವಿಜಪುರವೂ ಅಷ್ಟು ಸುಂದರ ವಾಗಿತ್ತು. ಬೆಟ್ಟ, ಬಳ್ಳಿಯಂತೆ ಸುತ್ತಿಕೊಂಡಿದ್ದ ನದಿ, ಮಾತೋಶ್ರೀ ಯಂತೆ ಪೂಜನೀಯಳಾದ ಪಾರ್ವತಿಮಂದಿರ ಬೇರೆ ಇದ್ದುದು, ದಿವಿಜ ಪುರದ ಚಲುವನ್ನು ಹೆಚ್ಚಿಸಿತ್ತು.

ಕವಿ ಮುಖ್ಯನಾದ ಕೇಳಿ ಪುಳಕಗೊಳ್ಳುತ್ತದೆ. ಬರಹಗಾರ ಕಾಂತ ನದಿಯ ಹತ್ತಿರ ತನ್ನದೇ ಆದ ಸ್ಥಳವನ್ನು ಮಾಡಿಕೊಂಡಿದ್ದ. ಅಲ್ಲಿಯೇ —ಆ ನದಿಬಯಲಲ್ಲಿಯೇ ಅವನು ತನ್ನ ಹೃದಯದೇಗುಲದೇವನನ್ನು ನೆನೆಯುತ್ತಾ ಲೇಖಣಿಯಲ್ಲಿ ಚಿತ್ರಿಸುತ್ತಾ ಕಾಲಕಳೆಯುತ್ತಿದ್ದ. ಅವನು ಬರಿಯುತ್ತಾ ನಗೆಮಲ್ಲಿಗೆಯನ್ನು ಚಿಮ್ಮುತ್ತಾ ಕುಳಿತ್ತಿದ್ದುದನ್ನು ಅನೇಕರು ನೋಡಿದ್ದರು. ಹಾಗೆ ನೋಡುತ್ತಿದ್ದವರ ಪೈಕಿ ಮುಗುದೆಯರ ಪೈಕಿ ಅಲಕೆಯೂ ಒಬ್ಬಳಾಗಿದ್ದಳು.

ಮನಸ್ಸು ಹೂಗಿಂತ ಕೋಮಲ. ಹೃದಯ ಚಚೌಕವಾದ ಸ್ವರೂಪ ಮಾತ್ರವಲ್ಲ. ಸಣ್ಣ ಅಥವಾ ಅತಿಸುತ್ತುಗಟ್ಟಿನ ಕೇಂದ್ರಮಾತ್ರವಲ್ಲ. ಅದು ವಿಸ್ಮಯವನ್ನುಂಟುಮಾಡುವ ದಿವ್ಯಾಕಾರ. ಅದಕ್ಕೆ ಒಂದು ಆವರಣವೇ ಇಲ್ಲ. ಏರುತಗ್ಗುಗಳಿಲ್ಲ. ಅದರ ಆವರಣದ ಗೋಡೆ ಯೋಜನ ಯೋಜನದಾಚೆಯಲ್ಲಿಯೇ ಇರುವುದು. ಸಮುದ್ರದಂತೆ ವಿಶಾಲವಾದ ಹೃದಯದಲ್ಲಿ ಸದಮಲವಾದ ಮಲರಲ್ಲದೆ ಮತ್ತೇನು ಬೆಳೆಯುವುದು? ವಿಶಾಲವಾದ ಸಮುದ್ರದಮೇಲೆ ಹಡಗು ಭೂಮಂಡಲವನ್ನು ಸುತ್ತಿ ಮರೆ ಯುವ ಹರಿಗೋಲು, ಲೀಲಾಜಾಲವಾಗಿ ಹರಿಯುವುದು. ಕಟುವಾದ,

ತೀಕ್ಷಣವಾದ ಮತ್ತು ಕೋಮಲವೂ ಆದ ಅಭಿಪ್ರಾಯ ಹೃದಯವಿಶಾಲದಲ್ಲಿ ಬೆಳಗುತ್ತದೆ ಎಂದು ಕಾಂತ ಅಭಿಪ್ರಾಯಪಟ್ಟಿದ್ದ.

ಮುಖ್ಯವಾಗಿ ಕಾಂತನ ತುತ್ತಿನಚೀಲದಿಂದ ಅಪಸ್ವರ ಹೊರಟಿರಲಿಲ್ಲ. ಅವನು ಬಲ್ಲಿದ ಮನೆಯವನಾಗಿದ್ದ. ಹೃದಯವೂ ಹೂಗಿಂತ ಕೋಮಲವೆ! ಹೃದಯ ಒಂದೊಂದುಸಾರಿ ವಜ್ರಕ್ಕಿಂತ ಕಠೋರವಾಗುತ್ತದೆ, ಅದು ಒಂದೊಂದುಸಾರಿ ಸತ್ಯತೆಯನ್ನು ಕೊರಲೆತ್ತಿ ಕೂಗುತ್ತದೆ; ಎಂದು, ಕಾಂತ ಬರೆದಿದ್ದ. ಆದರೆ ಅವನು, ವಿಷಕಂಠನಾಗಿ ಎಂದೂ ಇರಲಿಲ್ಲ. ಕಣ್ಣು ತೆರದು, ನೆತ್ತರು ಹರಿಸಿ, ವಿಪ್ಲವಮೂರ್ತಿಯಾಗಿ ನಿಂತಿರಲಿಲ್ಲ. ಅವನು ತನ್ನ ಯೋಜನೆಯೊಂದಿಗೆ ಭಾವತರಂಗದೊಡನೆ ಸಹಜವಾಗಿ ಮಿಳಿಯುತ್ತಿದ್ದ. ಹಸುರುಗಿಡದಎಲೆ ಗಾಳಿಯ ಆಟಕ್ಕೆ ಸಿಕ್ಕಿ ಅಲುಗಾಡುವಂತೆ, ಮುಗ್ಧಕನ್ಯೆ ಹಸೆಮಣೆಯ ಮೇಲೆ ಕುಳಿತು ಮದುಮಗನನ್ನು ಸಮೀಪಿಸಿ ನಗೆಮಲ್ಲಿಗೆಯನ್ನು ಚಿಮ್ಮುವಂತೆ, ಕಾಂತ ನದಿಸಾಮೀಪ್ಯದಲ್ಲಿ ಕುಳಿತು, ಪ್ರಣಯಿಗಳ ಸುಖದುಃಖವಿಚಾರವೆತ್ತಿ ಬರೆಯುತ್ತಿದ್ದ.

ಪ್ರಣಯಿಗಳು ತಮ್ಮ ಪರಸ್ಪರ ಪ್ರೇಮಪ್ರಸಾದರೂಪವಾದ ಹೂಮಾಲೆಯನ್ನು ಹಾಕಿಕೊಳ್ಳುತ್ತಾರೆ. ಕೊರಳಿಗೆ ಹಾಕಿದ ಮಾಲೆ ಬಾಡುವುದಾದರೂ ಹೃದಯದಲ್ಲಿ ಮೂಡಿದ ಪ್ರೇಮ ಬಾಡುವುದಿಲ್ಲ. "ಅಲಕಾ ಹೃದಯದ ಸಂತಾಪ ನಿವಾರಿಸಲು, ನೊಂದ ಕಲ್ಮಷವನ್ನು ತೊಳೆಯಲು, ಮತ್ತೊಂದು ಹೃದಯದ ಸಂಪರ್ಕ ಅವಶ್ಯಕ. ಕಲಾನಿಧಿ ಚಂದ್ರಮನ ಶೀತಲಛಾಯೆಯಿಂದ ಪ್ರಣಯಿಗಳು ಚೇತನಗೊಳ್ಳುತ್ತಾರೆ. ಅದು ಸಂಕಟ ಸಂತಾಪವನ್ನು ನಿವಾರಿಸುವುದು. ಸದಾ ಶ್ವೇತಕ್ಷೇತ್ರದಲ್ಲಿ ಸುಳಿಯುತ್ತಾ, ದಿವ್ಯಗನಸನ್ನು ಕಾಣುತ್ತಾ ಎಟುಕದ ದೂರದಾಸೆಗಾಗಿ ಕೈನೀಡುತ್ತಾ ಮಾನವರ ಆಶಾಬೆಳಗನ್ನು ಕನವರಿಸುವ ನನ್ನ ಹೃದಯ, ನಿನ್ನನ್ನು ನೆನೆಯುತ್ತಲೇ ಇರುತ್ತದೆ. ಅಲಕಾ! ನೀನು ನನ್ನ ಬೆಳವಲದ ಜಗತ್ತಿನ ಬ್ರಹ್ಮಾಣಿಯಲ್ಲವೆ?" ಎಂದು ಹೇಳುತ್ತಿದ್ದ ಕಾಂತ.

ಈ ಕಥೆ ಕಾಂತನ ಕಥೆಯಲ್ಲವೆ? ಅವನು ನೆನೆಯುತ್ತಿದ್ದುದೇ ಬೇರೆ. ಅವನ ಆದರ್ಶಸ್ವಪ್ನಕನಸು ಹಲವುತರವಾಗಿದ್ದವು. ಮುಖ್ಯವಾಗಿ ಅಲಕಾವನ್ನು ಅವನು ಮೆಚ್ಚಿ ಮದುವೆಯಾದ ವಿಚಾರವನ್ನು ತಿಳಿಸುವುದೇ ಈ

ಬರಹದ ಗುರಿಯಾಗಿದೆ. ಹೃದಯ ಸರ್ವಾಂಗ ಸೌಂದರ್ಯದ ಬೀಡೆಂದು, ಗಣನೀಯವಾದ ಸಾಮ್ರಾಜ್ಯವೆಂದು; ಅದಕ್ಕೆ ಪ್ರತಿಷ್ಠೆ, ವ್ಯಕ್ತಿತ್ವ, ಪಕ್ಷ-ಪಂಗಡಗಳಿಲ್ಲವೆಂದು ಕಾಂತ ಹೃದಯದ ಮೇಲೆ ಬಹಳ ವ್ಯಾಖ್ಯಾನ ಬರೆದಿದ್ದ. ಆದರೆ ಹೃದಯಕ್ಕೆ ಭಾವನಾಮಯದ ಬಯಕೆ ಪೂರಾಯಿದೆ. ಅದಕ್ಕೆ ಸುಖ, ದುಃಖ, ನೋವು, ಸಾವು ಎಲ್ಲಾ ಕರತಲಾಮಲಕವೆ. ಜೀವಕ್ಕೆ ಹೃದಯ ಉಸಿರು. ಜನತೆಗೆ ಲೇಖಕನೇ ಉಸಿರು. ಪ್ರಣಯಿಗಳಿಗೆ ಹೃದಯವೇ ಸ್ವತ್ತು. ಅದರಲ್ಲೂ ಲೇಖಕ, ಪ್ರೀತಿಕಾಣಿಕೆ ಸಲ್ಲಿಸಿಕೊಂಡವನು; ನಿಜವಾಗಿ ಮಂಗಳನೆ ಸರಿ. ಅವನು ಬರಹದಿಂದ ಜನತೆಗೆ ಸಲ್ಲಿಸಿಕೊಡುವುದು, ಕಲ್ಪಿಸಿಕೊಡುವುದು ಏನು?

ಪ್ರೇಮ ಅಧಿಕಾರಿಗಳ ಸೊತ್ತಲ್ಲ. ಅದು ಜೀವನ ಜನತೆಯ ಸಂಸ್ಕೃತಿಯ ತಿರುಳು. ಲೇಖಕ ಸಂಸ್ಕೃತಿದರ್ಶನದ ರಾಯಭಾರಿ. ಅವನು ತನ್ನ ಬಿಡಗಿನ ರಾಣಿ ಹೃದಯೇಶ್ವರಿಯನ್ನು ಮನಸಾರೆ ನೋಡಿಯೆ ಪ್ರೇಮದ ದರ್ಶನವನ್ನು ಚಿತ್ರಿಸಲೆತ್ನಿಸುತ್ತಾನೆ. ಪೈರುಪಚ್ಚೆಗಳಿಂದ ಕಂಗೊಳಿಸುವ ಭೂಮಿಯನ್ನು, ಹೆಚ್ಚಾಗಿ ಪ್ರಕೃತಿ ಸೌಂದರ್ಯ ಸೌಭಾಗ್ಯವನ್ನು ನೋಡಿ ಸವಿದೇ, ಕವಿ ಚೇತನಗೊಂಡು ಶೋಭಾಡಂಗುರವನ್ನು ಕಾವ್ಯದ ಮೂಲಕ ಸಾರುತ್ತಾನೆ.

ಅವನ ಹೃದಯದಲ್ಲಿ ಸುಪ್ತವಾಗಿದ್ದ ನೆಳಲು, ಅವನ ಉದಾರ ಹೃದಯದ ವಿಚಾರ; ಅವನ ಸರ್ವತೋಮುಖವಾದ ಬೆಳವಣಿಗೆ, ವಿಶ್ವ ಪ್ರೇಮ, ಸಹಜಪ್ರೇಮ ಇವೇ ಮುಂತಾದುವನ್ನು ಇನ್ನು ತಿಳಿಸ ಬೇಕಾಗಿದೆ. ಈ ಶಾಂತಿಮೂರ್ತಿ ಕಾಂತನೆದುರಾಗಿ, ನಾಲ್ಕೂದಿಕ್ಕಿನಲ್ಲಿ ಧಾಳಿ ನಡೆಯುತ್ತಲೇಯಿದ್ದಿತು. ಕವಿ ತನ್ನ ಉಜ್ವಲ ವೈಭವದಲ್ಲಿದ್ದಾಗ ಸಂಕುಚಿತ ಪಂಥದವರು ದಾಂಧಲೆ ನಡೆಸಿದರು. ಕಾಂತ ಜನರಿಗಾಗಿ, ಓದುಗರಿಗಾಗಿ, ಬಂಧುಗಳಿಗಾಗಿ ತನ್ನ ಯೋಜನ ನಕಾಶವನ್ನು ಎಳ್ಳಷ್ಟು ಬದಲಾಯಿಸಿಕೊಳ್ಳಲು ಇಷ್ಟಪಡಲಿಲ್ಲ.

ಕಾಂತ ತನ್ನ ಭಾಗದಗಡಿ, ಜೀವದಗಡಿ; ತನ್ನದೇ ಆಗಿದ್ದ ಸರ್ವ ಸ್ವಾತಂತ್ರ್ಯದಗಡಿ, ಎಲ್ಲಕ್ಕೂ ಮಿಗಿಲಾದ ಅಂತರಾಳದಗಡಿ, ಹೃದಯದ ಏಕೀಕರಣದಗಡಿಯನ್ನು ಬಲವಾಗಿ ಕಾಯ್ದುಕೊಂಡಿದ್ದ. ಅವನ ಮಿಂಚಿನ

ರಾಣಿ, ಅಲಕಾ ಜೀವಮಾನದ ಆಗುಹೋಗುವನ್ನು ನಿರ್ಣಯಿಸುವ ಅಧಿಕಾರಿಣಿಯಾಗಿದ್ದು; ಭಾಗ್ಯದ ಭಾಗದ ಗಡಿಯನ್ನು ಎಚ್ಚರದಿಂದ ನೋಡಿಕೊಳ್ಳುವ ದೀಕ್ಷೆವಹಿಸಿಕೊಂಡಿದ್ದಳು.

ಅಲಕಾ ಕಾಂತನ ಪ್ರತಿಧ್ವನಿ. ಕವಿ ಭಾವಸಮಾಧಿಯಲ್ಲಿದ್ದು ಕೊಂಡು ಏಕಾಂತದಲ್ಲಿದ್ದುಕೊಂಡು ತನ್ನ ಕನಸ್ಸು ಕಟ್ಟುತ್ತಿದ್ದ. ಈ ಜೀವ ಹೃದಯಿಗೆ ನಿಜವಾಗಿಯೂ ಮಾನವ ಹೃದಯದ ಮೂಲೆಗಳು ಗೊತ್ತಿದ್ದಿತು. ದೈವಸಹಾಯ ನನಗಿಲ್ಲವಾಗಿದೆ, ಸ್ನೇಹದ ಸಹಾಯಮಾತ್ರವಿದೆಯೆಂದು ಅವನು ಹೇಳುತ್ತಿದ್ದ. ಪ್ರೇಮ, ಮಧುಪಾನ, ಅಮೃತಸ್ಪರ್ಶ ಮಾಡಿದ ಕವಿ; ತುಂಬುದನಿಯೊಂದಿಗೆ ಪ್ರೇಮಾಗ್ನಿ ಹೃದಯಾಗ್ನಿ ಬೇಗೆಯನ್ನು ಬರಹದ ಮೂಲಕ ಬಣ್ಣಿಸಿದ್ದ. ಈ ಎಲ್ಲಾ ಜ್ಞಾನಸ್ನಾನ, ಭಾವಸ್ನಾನ; ಗಂಗಾಸ್ನಾನ, ಅವನ ಏಕಾಗ್ರಮನಸ್ಸು, ಆತ್ಮಸಮ್ಮಾನಕ್ಕೆ ಅಭಿನಯಕ್ಕೆ ಕಾರಣಳೇ ಲಾವಣ್ಯವತಿ ಅಲಕೆಯಾಗಿದ್ದಳು. ಕಾಂತ ಪೂರ್ಣವಾಗಿ ಒಂದೇ ಬಾರಿಗೆ ತನ್ನ ಹೃದಯವನ್ನೆಲ್ಲಾ ಅಲಕೆಗೆ ಕೊಟ್ಟುಬಿಟ್ಟಿದ್ದ. ಅವಳು ಮರೆತಳೆಂದರೆ ತೀರಿತು, ಜೀವದುಸಿರನ ಕಿರಣ ಕೊನೆಯಾಯಿ ತೆಂದು ನಿಟ್ಟುಸಿರು ಬಿಡುತ್ತಿದ್ದ. ಆಗ ದಿವಿಜಪುರದ ಛಾಯೆಯೇ ಮುಸುಕಿ ದಂತೆ ಕಾಣುತ್ತಿತ್ತು.

ವಿಚಾರ ಪರಿಪ್ಲುತ ಹಾಗೂ ಪಾಂಡಿತ್ಯಪೂರ್ಣ ವಿಚಾರವನ್ನು ಆಯ್ದು ಸಂಗ್ರಹಿಸುತ್ತಿದ್ದ. ನದಿನೀರದಲ್ಲಿ, ಭಾವಮನೋರಂಗದಲ್ಲಿ ನಿತ್ಯವೂ ಕುಳಿತು ಪ್ರೇಮದ ಹೊಸಕಾವನ್ನು ಉತ್ಸಾಹದಿಂದ ಬರಿಯುತ್ತಿದ್ದ. ಮನುಷ್ಯ ತನ್ನ ದೇಶವನ್ನು, ಸಾಮರ್ಥ್ಯವನ್ನು, ನಿಧಿಯನ್ನು ಹೆಚ್ಚಾಗಿ ತೋಡಿಕೊಳ್ಳುತ್ತಾನೆ. ಕವಿಯಾದವ, ಮಾನವ ಹೃದಯವನ್ನು ಅರಿ ತವನು, ಹೆಚ್ಚಾಗಿ ತನ್ನ ಪ್ರೀತಿಯನ್ನು, ಕಾಂತಿಯನ್ನು ಹಾಡಿಕೊಳ್ಳುತ್ತಾನೆ. ಹೃದಯ ಹಾಲುಗಲ್ಲು. ಅಲ್ಲಿ ಕಡಿದುಮಾಡಿದ ಪೆಟ್ಟಿಗೆಯಲ್ಲಿಯೇ ಪ್ರೇಮ ಅಡಗಿರುವುದು. ನದಿತೀರದಲ್ಲಿ ಬರಿಯುತ್ತಾ, ಪ್ರೇಮದಿಂದ ಪ್ರೇಮವನ್ನು ಬೆಳೆಸಿ; ಪ್ರೇಮದ ನೆಳಲಿನಲ್ಲಿ ಬದುಕುವುದೇ ನಿಜವಾದ ಬದುಕೆಂದು ಕಾಂತ ಬರೆದಿದ್ದ. ಬರಹಗಾರ ವಿದ್ವನ್ಮಣಿಗಳ ಚಕ್ರವರ್ತಿ. ಸಂವತ್ಸರ ಕ್ಕೊಂದು ಬಾರಿ ವಿಭೂತಿಗಳ ದಿನವೆಂದೂ ಜಯಂತಿಯೆಂದೂ ಆಚರಿ

ಸುತ್ತಾರಲ್ಲಾ, ಆ ದಿನವನ್ನು ಕವಿ ಹೊಸಗ್ರಂಥ ಬರೆದೇ ತನ್ನ ಆಯುಷ್ಯದ ಸತ್ಪರಿಣಾಮ ತೋರಿಯೇ ಜನುಮದಿನವನ್ನು ನಡೆಸಿಕೊಳ್ಳುತ್ತಾನೆ. ಮುಂದೆ, ಕಾಂತನ ಚೆಂಗಲವೆ ಅಲಕಾ ಹೇಗೆ ಚೇತನದಾಯಿಯಾಗಿ, ಜೇನುತುಟಿಯಹೆಣ್ಣಾಗಿ ನಿಂತು ಪ್ರೋತ್ಸಾಹಿಸುತ್ತಾ ಹೊಸ ಹೊಸ ಕಿರಣ ಗಳು ಕವಿಯ ಲೇಖಣಿಯಿಂದ ಹೊರಬೀಳುವಂತೆ ಮಾಡಿದಳು ಎಂಬು ದನ್ನು ತಿಳಿಯುವಾ.

೨

ದಿವಿಜಪುರ, ಕಾಂತ, ಅಲಕಾ ಇವರ ಪರಿಚಯವಾಯಿತಷ್ಟೆ. ಮುಗುದೆಯರಾತ್ಮವನ್ನು ಹಲವುಸಾರಿ ಮಿಡಿದಿದ್ದ ಕಾಂತನ ಬರಹವನ್ನು ಎತ್ತಿ ಬರೆಯುವುದಿದೆ. ಮುಖ್ಯವಾಗಿ ಕಾಂತ ಮೂರು ಪ್ರಣಯ ಸಂವಿಧಾನ ಕಥೆಯನ್ನು ಬರೆದಿದ್ದ.

ಒಂದನೆಯದು "ಕಲ್ಪಾಂತರ". ಮನುಜನಾಗಲೀ ಮಹಿಳೆಯಾ ಗಲೀ ಜಗತ್ತಿನಲ್ಲಿ ಬರೀ ಪ್ರಜ್ಞಾಶಾಲಿಗಳಾಗಿಯೇ ಉಳಿದು ಜೀವ ಮುಗಿಸಲಾರರು ಎಂಬ ವಿಚಾರವನ್ನು ಕಾಂತ ಎತ್ತಿ ಬರೆದಿದ್ದ. ಕಥೆ-ಕಾದಂಬರಿ-ಕಾವ್ಯದ ಅಂತ್ಯ ಏನಾದರೂ ಒಂದು ಹೊಸಭಾವವನ್ನು ತಾನೆ ಸೂಚಿಸುತ್ತದೆ? ಕಥೆಯೆಂದರೆ ನಾನಾ ರೂಪದ ಪ್ರೇಮದ ಜನನ ನಿಧನವೇ ಆಗಿರುತ್ತದೆಯಲ್ಲವೆ? ಲೇಖಕ ಜೀವಹೃದಯಿಯೇ ಆಗಿರಬೇಕು, ಇಲ್ಲ ದಿದ್ದಲ್ಲಿ ಅವನನ್ನು ಬರಹಗಾರನೆಂದು ಯಾರೂ ಪರಿಗಣಿಸಲಾರರು. ನಿರ್ದಯಿ, ಅಮಾನುಷ, ಹೃದಯವಿಲ್ಲದ ವ್ಯಕ್ತಿ ಬರಹಗಾರನಾಗುವುದು ಹೇಗೆ? ಅವನಿಗೆ ಬರಹವೆಲ್ಲಿ ಹಸ್ತಗತವಾಗಿರುವುದು! ಹೃದಯದ ಕಣ್ಣು ತೆರೆದು, ಅವಲೋಕಿಸಿ; ಪುನಃ ಪುನಃ ನಿಲವನ್ನು ಕಂಡೇ ಅವನು ಚಿತ್ರಿಸ ಬೇಕಾಗುವುದು. ಕಾಂತನ, ಮುಗುದೆಗೆ ಮನಸೋತ ಮಲ್ಲನ ಕಥೆ "ಕಲ್ಪಾಂತರ" ತಿಳಿಯೋಣ.

ಮಲ್ಲ ಎಂಬುವನು "ಕಲ್ಪಾಂತರ" ಕಥೆಯ ಕಥಾನಾಯಕ. ಅವನು ಮಹಾಮೇರುಪರ್ವತ ಇಳಿದುಬಂದವನಲ್ಲ. ಮಹಾವೀರನೂ ಆಗಿರಲಿಲ್ಲ. ಉದಾರಮನಸ್ಸಿನ ಪ್ರೀತಿ ಮಹೋದಯ ಬೆಳೆಸಿದ ಮಂಡಲೇಶನಾಗಿದ್ದ.

ಮಂಗಳಛಾಯೆ ಸಿಂಧುಯೆಂಬ ಬೆಡಗಿನ ಸಿಂಗಾರಿಯನ್ನು ಮಲ್ಲ ಪ್ರೀತಿಸಿದ್ದ. ಅವಳ ಪ್ರೇಮಸಾಗರದಮೃತ ಸವಿದು ನೋಡಲು ಮಲ್ಲ, ನಿಷ್ಕರುಣದಲ್ಲಿ ಬೇಯುತ್ತಾನೆ. ಪ್ರೇಮವನ್ನು ಕಾಣದಯೆ ಕನಲುತ್ತಾನೆ. ಚಲುವಾದ ನಿರ್ಮಲವಾದ ಹೆಣ್ಣು ಸಿಂಧು, ತನ್ನನ್ನು ಬಯಸಿ ಬಂದ ಮಲ್ಲನನ್ನು ತಿರಸ್ಕರಿಸುತ್ತಾಳೆ. ಮನಸ್ಸಿನಲ್ಲೆ ಬೆಳೆಸಿದ್ದ ಪ್ರೇಮದ ವಾಂಛೆಯನ್ನು ಕಾಣದೆ ಬೇಗೆಯಲ್ಲಿಯೇ ಮಲ್ಲ ನಿರಾಶೆಗೊಳ್ಳುತ್ತಾನೆ. ಅವನ ಭಾವ, ಬಗೆಬಗೆಯ ರಾಗದ ಕನಸುಗಳು ಮುರುಕು ದೇಗುಲ ಸೇರುತ್ತದೆ. ಅವನ ಕಲ್ಪನಾಜಗತ್ತು ಮುಗಿಯುತ್ತದೆ. ಕಾಲಧರ್ಮದ ದಂಡಕ್ಕೆ ಅವನು ತುತ್ತಾಗಿ ಪ್ರಾಣಬಿಡುತ್ತಾನೆ. ಕರುಣ ಕಥೆ ಹೀಗೆ ಮುಗಿಯುತ್ತದೆ.

ಮಲ್ಲನಗತಿ ಮುಗಿಸುವುದಕ್ಕೆ ಮುಂಚೆ ಕೆಲವು ವಿಷಯಗಳನ್ನು ಹೇಳಬೇಕಾಗಿದೆ. ಅವನು ಸಿಂಧುಯೆಂಬ ಹೆಣ್ಣೊಂದಿಗೆ ಹುಚ್ಚಾಟವಾಡಿದ್ದ. ಅವನ ಜೀವನಭವಿತವ್ಯ ಹೊಸಸೃಷ್ಟಿ ಕಂಡಿತೆ, ಹೇಗೆ? ಸೌಂದರ್ಯೋಪಾಸಕ ಮಲ್ಲನ ಹೃದಯವನ್ನು ಒಡೆದು ಸಿಂಧುವೇಕೆ ಅನ್ಯಾಯವಮಾಡಿದಳು? ಪ್ರೀತಿ ಪುಣ್ಯೋದಕ ಪವಿತ್ರವಾದುದು; ಹೀಗಿರುವಾಗ ಹಕ್ಕಿಯೊಡನೆ ಹಾಡಿ, ಹೂವೊಂದಿಗೆ ತಣಿದು, ಹುಣ್ಣಿಮೆಯಲ್ಲಿ ನಲ್ಲನನ್ನು ಕೂಡಿ ಹಿಗ್ಗಿ ಹಾಡಬೇಕಾಗಿದ್ದ ತರಳೆ ಸಿಂಧು, ಅಂತಹ ಅನ್ಯಾಯವೇಕೆ ಮಾಡಿದಳು?

ಪ್ರೀತಿ ವಿಶ್ವದ ಎದೆಎದೆಯ ಮೇಲೆ ಪ್ರತಿಧ್ವನಿಸುತ್ತದೆ. ಸಿಂಧು ಕವಿತಾಕಾಮಿನಿ, ತನಗೆ ಸದಾನಂದವೀಯುವ ಮಾನಿನಿ; ಸುರಸುಂದರಿ, ಅವಳಿಗೆ ಭಾವ, ಹೃದಯ, ಯೋಗ್ಯತೆ ಎಲ್ಲವೂ ತಿಳಿದಿದೆ. ನನ್ನ ಪ್ರೀತಿ ಕಾಣಿಕೆ ಸ್ವೀಕರಿಸಿ, ಅಂಗೀಕರಿಸಿ ಪುರಸ್ಕಾರವೀಯುವಳೆಂದು ಮಲ್ಲ ತಿಳಿದಿದ್ದ. ಸಿಂಧು ಪುರಸ್ಕಾರವೀಯಲಿಲ್ಲ! ಅವಳು ಮಲ್ಲನ ಅಂತರ್ಯದ ಬಯಕೆಗೆ ಪುರಸ್ಕಾರವೀಯಲಿಲ್ಲ. ಹೀಗಾಗಿ ಪ್ರಣಯಪ್ರಪಂಚ ಬೆಳೆಯಲಿಲ್ಲ. ಅನಂತಪ್ರೇಮ ಫಲಿಸಲಿಲ್ಲ. ಪ್ರತೀಕ್ಷೆ, ಪಿಪಾಸೆ ಬಯಲಾಸೆಯಾಯಿತು. ರಾಗರತಿಯೆನಿಸಿದ ಸಿಂಧು, ಮಲ್ಲನ ಹೃದಯವೀಣೆಯನ್ನು ಮಿಡಿಯಲು ಸಿದ್ಧಳಾಗಲಿಲ್ಲ. ಜೀವನಸಂಗೀತದ ಪ್ರೇಮದಪಲ್ಲವಿ ಹಾಡುವುದಕ್ಕೆ ಮೊದಲೇ ಕಡಿದುಹೋಯಿತು. ಹರೆಯದ ಹಂಬಲಕ್ಕೆ ಬಹುಕಾಲ ತ್ರಾಣವಿರುವುದಿಲ್ಲ ಎಂಬುದು ನಿಜ. ಇದನ್ನು ಸಿಂಧು ಅರಿಯದೇ

ಹೋದಳು. ಪ್ರೇಮದ ಕನಸಿನ ಮೇಲ್ಮೆಯನ್ನು ಮಲ್ಲನೊಡನೆ ಕಾಣಲು ನಿರಾಕರಿಸಿದವಳು, ಕೊನೆಗೆ ಪಶ್ಚಾತ್ತಾಪ ಪಟ್ಟಳು.

"ಎನ್ನೆದೆಯ ಬೆಳಕೆ" ಎಂದು ನಂಬಿದ್ದ ಮಲ್ಲನನ್ನು ತೊರೆದು ಸಿಂಧು, ರೂಪ ದೇವ ತನಗಿತ್ತ ಅಧಿಕಾರವೆಂದು ಹೆಮ್ಮೆಪಟ್ಟುಕೊಂಡಿದ್ದಳು. ಪ್ರೀತಿಯ ಪರಾಗದಲ್ಲಿ ತನಗಿಂತಲೂ ಮತ್ತಾರಿರುವರುಯೆಂದು, ಸಿಂಧು ರೂಪರಾಸಿಗೆ ಹೆಚ್ಚು ಮಹತ್ವ ಕೊಟ್ಟಿದ್ದಳು. ನೀನೇ ನನ್ನ ಜೀವ, ನನ್ನ ಉಸಿರು ಎಂದು ಹೃದಯವನ್ನೆಲ್ಲಾ ತೆತ್ತಿದ್ದ ಮಲ್ಲನನ್ನು ನಿರಾಶೆಗೊಳಿಸಿದಳು. ಪ್ರೀತಿಪ್ರಪಂಚದಲ್ಲಿ ಪುನೀತನಾಗಿ ಪುನರ್ಜನ್ಮ ಪಡೆಯುವನೆಂದು ಕಾಯುತ್ತಿದ್ದ ಮಲ್ಲನ ಎದೆಯೊಡೆದು ಹೋಯಿತು. ಸಿಂಧು ಸ್ವಲ್ಪವೂ ಯೋಚಿಸದೆ ನಿರಾಕರಿಸಿದುದರಿಂದ ಮಲ್ಲ, ಪ್ರೇಮದ ಮಧುಶಾಲೆಯಲ್ಲಿ ಹಾಲಾಹಲವನ್ನುಂಡು ಮಲಗಿಬಿಟ್ಟ. ಪ್ರೀತಿಗಾಗಿ ಜೀವವನ್ನು ಬಲಿ ಕೊಟ್ಟು ಶಿರವನೊಪ್ಪಿಸಿದ.

"ಕಲ್ಪಾಂತರ" ಹೀಗೆ ಕಾಂತನ ಲೇಖಣಿಯಿಂದ ಹೊರಬಿದ್ದಿದೆ. ಎದೆಯೊಡೆದುಕೊಂಡು ಸತ್ತ ಮಲ್ಲನನ್ನು ಕುರಿತು, ಕಾಂತ ಚನ್ನಾಗಿ ಬರೆದಿದ್ದಾನೆ. ಮಲ್ಲ ಮತ್ತು ಸಿಂಧುವಿನ ಕಥೆ "ಕಲ್ಪಾಂತರ" ಎಂಬ ಹೆಸರಿನಿಂದ ಹೊರಬಿತ್ತು. ಮಲ್ಲನ ಅತಿಪ್ರೇಮ, ದೇವಗಾನವನ್ನೇ ಕಾಂತ ಎತ್ತಿ ಬರೆದುದು. ಸಿಂಧು ಅತಿಸುಂದರ ಚೆಲುವೆಯಾಗಿದ್ದರೂ ಹೃದಯವಿಲ್ಲದ ರಾಕ್ಷಸಿಯಾಗಿದ್ದಳು. ಚಲುವಾದ ಎಳೆನಾಗರದ ದವಡೆಯಲ್ಲಿ ಭೀಷಣವಾದ ವಿಷವಿದ್ದೇ ಇರುವುದು. ಚೆಲುವೆ ಸುಂದರಿಯ ಒಳ ಹೃದಯದಲ್ಲಿ, ಪ್ರೇಮಕ್ಕೆಬದಲಾಗಿ ವಿಷವಿರುತ್ತದೆಯೆಂಬುದನ್ನು ಕಾಂತ ಬರೆದಿದ್ದಾನೆ. ಸಿಂಧು ತನ್ನ ರೂಪರಾಶಿಗೆ ಹೆಚ್ಚು ಮೌಲ್ಯವಿತ್ತು, ವಿಶಾಲ ಹೃದಯಿ ಮಲ್ಲನನ್ನು ಆಹುತಿ ತೆಗೆದುಕೊಂಡಳು.

ಪ್ರೀತಿ ಕಾರುಣ್ಯದ ಬಗ್ಗೆ ನಾನಾ ವಿನ್ಯಾಸಬರೆದು, ಕೀರ್ತಿ ಸಂಪಾದಿಸಬೇಕೆಂದಿದ್ದ ಬರಹಗಾರ. ಕಾಂತನ ಲೇಖಣಿಯ ತುತ್ತುತುದಿಯಿಂದ ರಾಶಿರಾಶಿ ಪ್ರೇಮಮೂರ್ತಿಗಳು ಸೃಷ್ಟಿಗೊಂಡರು. ರಾಗದ ಆಟ ಬರೆಯುತ್ತಿದ್ದ ಕಾಂತನ ಪ್ರೇಮದ ಆಟವನ್ನು ತಿಳಿಯಲೇ ನಾವು ಹೊರಟಿರುವುದು. ಅವನ ವಿವರಣೆ, ವಿನ್ಯಾಸ, ಕರುಣ ಕಥೆ, ಭಾಷಾಸರಣಿ, ಸ್ತ್ರೀಸಮು

ದಾಯದ ಬೃಹತ್ ವಿವರಣೆ ಎಲ್ಲಾ ತಿಳಿದಮೇಲೆಯೇ ಪ್ರೀತಿ ಕಲೋಪಾಸಕ ಕಾಂತನ ಚರಿತ್ರೆಯನ್ನು ಸುಲಭವಾಗಿ ತಿಳಿಯುವುದು. ಅವನ ಪ್ರಣಾಲಿ ಅಲಕಾ, ಅವನ ಚೇತನ ನಗರ ದಿವಿಜಪುರ, ಗ್ರಂಥಾವಳಿ, ಕುಳಿತು ಬರೆಯುತ್ತಿದ್ದ ಯೋಗಭೂಮಿಯನ್ನು ತಿಳಿಯಬೇಕು. ಅನುರಾಗಿ ಕಾಂತ, ಅವನ ರಾಗಿಣಿ ಅಲಕಾ ಇವರ ಆತ್ಮೀಯತೆ ಕಾಣಬೇಕು. ಇವರಿಬ್ಬರೂ ಸೇರಿ ನಮಗೆ ಪುಣ್ಯಪ್ರಭಾವಿಗಳ ಸಂದರ್ಶನ ಮಾಡಿಸಿದ ವಿಚಾರ ನೆನೆಯಬೇಕು.

ಕಾಂತನ ಎರಡನೆಯ ಕೃತಿ "ಭಾವಪೂಜಾ" ತಿಳಿಯೋಣ. ಪ್ರದಾಯಿನಿಯೆಂಬುವಳು ಈ ಪ್ರೇಮದಕಥೆಯ ನಾಯಿಕೆ. ವಸಂತನೆಂಬುವನು ನಾಯಕ. ವಸಂತ ಜವ್ವನಿಗ. ಹೊಸಹೊಸಕಾಲದ ನವದಿನಗಳನ್ನು ನೆನೆಯುತ್ತಾ ತಿಳಿಯುತ್ತಿದ್ದವ. ಅಮೃತಲಹರಿ, ಮೃದುಲರವ ಫಲಕ್ಕಾಗಿ ತೊಳಲುತ್ತಿದ್ದವನು, ರಂಗುಭೃಂಗಿಯ ಸಂಗಕ್ಕಾಗಿ ಅಲೆದಾಡುತ್ತಿದ್ದ. ಅವನ ಮೆಚ್ಚುಗೆಯಾಗಿ ನೀರೆಪ್ರದಾಯಿನಿ ಮನವನ್ನು, ದೇಹವನ್ನು ಅರ್ಪಿಸಿದ್ದಳು. ವಸಂತ ಕಳ್ಳಕಾಕರ ಪಡೆಯವನಂತೆ ಗೊತ್ತುನಿಟ್ಟಿಲ್ಲದ, ನೀತಿನಿಯಮವಿಲ್ಲದ ಜಾರ. ಅವನಿಗೆ ತನ್ನನ್ನು ನಂಬಿ ಬಂದ ಹೆಣ್ಣನ್ನು ಕೈಬಿಡಬಾರದೆಂಬ ಧರ್ಮಬುದ್ಧಿಯಿರುವುದಿಲ್ಲ. ಅವನು ತನ್ನನ್ನು ಜೀವದುಸಿರೆಂದು ನಂಬಿದ್ದ ಪ್ರದಾಯಿನಿಯನ್ನು ದೂರಮಾಡುತ್ತಾನೆ. ಅವಳ ಕಂಬನಿ, ಕುದಿದ ಹೃದಯ, ಬೆಳೆಸಿದ್ದ ಆಶೆ ಎಲ್ಲವೂ ಕನಲಿ ನಿಷ್ಫಲವಾಗಿಹೋಗುತ್ತದೆ. ಪ್ರದಾಯಿನಿ ಕೊನೆಗೆ ನಿಡುಸುಯ್ದು, ಹುಚ್ಚಿಯಾಗಿ ರಾಕ್ಷಸಿಯಾಗುತ್ತಾಳೆ. ಅವಳ ನವಕಲಾವೈಭವರೂಪರಾಶಿ ಅಳಿದುಹೋಗುತ್ತದೆ. ಬೆಡಗಿನ ಹೃದಯ ಜಾರಿಬಿದ್ದ ವೀಣೆಯಂತೆ ಮುರಿದುಹೋಗುತ್ತದೆ.

ಇನ್ನು ವಸಂತನ ಬಗೆ? ಪ್ರದಾಯಿನಿಯ ಕೊರಳನ್ನು ಅವನು ಲೆಕ್ಕಿಸುವುದಿಲ್ಲ. ನಿತ್ಯವೂ ಬೇರೆಬೇರೆ "ಬೇಟೆ" ಆರಿಸಿ ಹೋಗುತ್ತಿದ್ದ ವಸಂತ ಪ್ರದಾಯಿನಿಯನ್ನು ಲೆಕ್ಕಿಸುವುದೆಲ್ಲಿ? ಇವನದು ಅಲೆಯುವ ಪ್ರವೃತ್ತಿ; ಅವಳದು ಹೃದಯವೊಂದುಕಡೆ ಅರ್ಪಿತವಾಗಿದೆ, ಅಲ್ಲಿಯೇ ಕೊನೆಗಾಣಲಿಯೆಂಬ ಚೇತನ. ಏನಾದರೂ ವಸಂತನ ಕಲ್ಲೆದೆ ಕರಗುವು

ದಿಲ್ಲ. ಪ್ರದಾಯಿನಿ ಹೃದಯ ಮುರುಕುಮಂಟಪ ವಾಗುತ್ತದೆ. ಕೊನೆಗೆ ಅವಳು ನಾಶವಾಗುತ್ತಾಳೆ. ವಸಂತ, ಬೆಳಗಿನಹೊತ್ತು ಪಕ್ಷಿಗಳು ಮರದ ಮೇಲೆ ಕುಳಿತಿದ್ದು; ಸಂಜೆವೇಳೆ ಮರೆಯಾಗಿ ಗೂಡು ಸೇರುವಂತೆ ಅತ್ತಿತ್ತ ಸರಿದುಹೋಗುತ್ತಿರುತ್ತಾನೆ. ಅವನೊಬ್ಬ ಅಂತರಾತ್ಮ ಶುಚಿಯಿಲ್ಲದ ಶುನಕ. ಪ್ರದಾಯಿನಿ ಪರಮಮುಕ್ತಿ ಪಡೆಯಲೆಣಿಸಿದ ಸಾಧ್ವಿ ಎಂದು ಕಾಂತ ಮುಗಿಸಿದ್ದಾನೆ.

ಪ್ರದಾಯನಿ ಶ್ರೇಷ್ಠ ಗುಣವುಳ್ಳವಳು. ನಿಷ್ಕರುಣಿ ವಸಂತನ ಬಲೆಗೆ ಅವಳು ಹೇಗೆ ಬೀಳುತ್ತಾಳೆ? "ಪುಣ್ಯವಿರುವತನಕ ಸಿರಿಯು ನಮ್ಮಲ್ಲಿರುವುದು" ಎಂಬಂತೆ ತಾನು ಸಾಧ್ವಿಯಾಗಿ ಜೀವಕುಲದಲ್ಲಿ ಹುಟ್ಟಿದ ಕಸ್ತೂರಿಯೆನಿಸಬೇಕೆಂದಿರುತ್ತಾಳೆ. ಸ್ಥಿರಮನಸ್ಸಿನಿಂದ ಭಜಿಸುತ್ತಾ, ತನಗಾಗಿ ಸಂಪದವಿದೆಯೆಂದು ನಂಬಿ ಕೊನೆಗೆ ಮೋಸಹೋಗುತ್ತಾಳೆ. ವಸಂತ ಚಪಲಮತಿ. ಅವನಿಗೇನು ಸುಗುಣಿಯಾದರೇನು, ಶೀಲೆಯಾದರೇನು ಅಂತಃಶುದ್ಧಿಯಿಲ್ಲದವನಿಗೆ!

"ಭಾವಪೂಜೆ" "ಕಲ್ಪಾಂತರ" ಕಥೆಯ ಪಾತ್ರಗಳನ್ನು ಇಲ್ಲಿ ವಿವರಿಸುವುದರಲ್ಲಿ ಅರ್ಥವಿದೆ. ಲೇಖಕ ಕಾಂತನ ಉದಾತ್ತಧ್ಯೇಯ, ಸರಳಜೀವನವನ್ನು ನಾವು ತಿಳಿಯಬಹುದು. ಅವನ ಬೆಂಗಾವಲಿನ ಬೆಳಕಾಗಿದ್ದ ಅಲಕಾವಿನ ವಿಚಾರವನ್ನು ತಿಳಿಸಬೇಕಾಗಿದೆ. ಕವಿಯಾಗಲೀ ಮಾನವನಾಗಲೀ ಒಮ್ಮೆ ಒಂದು ಹೃದಯಕ್ಕೆ ಸೋತುಬಿದ್ದನೆಂದರೆ ತೀರಿತು. ಪುನಃ ಪುನಃ ಅದಕ್ಕೆ ಬೀಳುತ್ತಲೇಯಿರುತ್ತಾನೆ. ಸೆರೆಕುಡುಕನಂತೆ ಪ್ರೇಮಿಯೂ ಪುನಃ ಪುನಃ ತೆಕ್ಕೆಗೆ ಬೀಳುವುದು ಸಹಜ.

ಮಾನವನ ಸಂಸಾರಿಕ ಮುಖ್ಯ ತಥ್ಯವೇನು? ಕಥೆ-ಕಾದಂಬರಿಗಳಲ್ಲಿ ಲೇಖಕ್ಕ ಹೇಳ ಬಯಸುವುದೇನು. ಯಾವುದಾದರೂ ಎಲ್ಲಿಗೆ ಮುಕ್ತಾಯಗೊಳ್ಳುವುದು. ಅವನು-ಅವಳ ಕಥೆ ಅಥವಾ ಕಾದಂಬರಿ ಪರಿಣಾಮಕಾರಿಯಾಗುವುದೆಲ್ಲಿ? ಪಾತ್ರಗಳ ಮತ್ತು ಸುತ್ತುಮುತ್ತಲ ವಸ್ತುಗಳ ಬೃಹದಾಕಾರದ ಛಾಯೆಯೇ ಕಥೆಗಳು-ಕಾದಂಬರಿಗಳು. ಅವಳು-ಅವನ ಕಥೆ ಜೀವಂತ ಉದ್ಧಾರದಲ್ಲಿ ಮುಗಿಯಬಹುದು. ಇಲ್ಲವೇ ವಿಷಾದಾಂತ್ಯದಲ್ಲಿ ಕೊನೆಗಾಣಬಹುದು. ಪ್ರೇಕ್ಷಣೆಯಿಂದ, ಹರ್ಷದಿಂದ

ಕವಿ; ಬಣ್ಣ ಬಣ್ಣದ ಮಾತುಗಳಿಂದ, ತನ್ನ ಪವಿತ್ರ ಲೇಖಣಿಯಿಂದ ಜೀವರಾಶಿಯ ನಾನಾ ರೂಪರೇಖೆಯನ್ನು ಚಿತ್ರಿಸುತ್ತಾನೆ.

"ಪ್ರೇಮ ಮಧುರವಾದುದು" ಎಂದು ಕವಿಯು ಹೇಳುವ ಮಾತು ಸುಳ್ಳೆಂದು ಜನರಾಡುವರು. ಚೆಲುವೆಯರ ಕೈಹಿಡಿಯಲು ಕವಿಯು ಹೂಡಿದ ಆಟವೆಂದು, ಹೂಡಿದ ಜಾಲವೆಂದು ಹೇಳುವವರು ಹಲವರಿದ್ದಾರೆ. ಕವಿಯ ದಿವ್ಯಪ್ರೇಮ ಜನರಿಗೆ ಅರ್ಥವಾಗುವುದು ಹೇಗೆ? ಕಾವ್ಯದೃಷ್ಟಿಯ ಕಡೆಗೆ ಅವನ ಮನವಿರುವಂತೆ ಪ್ರೇಮದ ಕಡೆಗೂ ಇರುತ್ತದೆ. ಕವಿಯ ಮನೋರಂಗವೇ ಬೇರೆ; ಭಾವನಾಪ್ರಪಂಚವೇ ಬೇರೆ. ಲೇಖಕ, ಓದುಗರಿಗಿಂತ ಮುಂದಾಗಿ ಯೋಜನಗಳಾಚೆ ಇರುತ್ತಾನೆ. ಅವನು ಕಾಣುವ ಕನಸು, ಬರೆಯುವ ವರ್ಣನೆ, ರಚಿಸುವ ಚಿತ್ರ ಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗುವುದಿಲ್ಲ. ಧರ್ಮಪ್ರಚಾರಕ ನಾನಾ ಹಿಂಸೆಗೆ ಗುರಿಯಾಗಿ ಕೊಲೆಯಾಗುತ್ತಾನೆ ಏಕೆ? ತನ್ನ ಪಂಥ ಸೃಷ್ಟಿಮಾಡಬೇಕು, ಧ್ಯೇಯ ದೂರವನ್ನು ಸೇರಲೇಬೇಕೆಂಬ ಧ್ಯೇಯದಿಂದಲೇ ಅವನು; ಶಾಂತಿಯಿಂದ ಬಂದ ಎಲ್ಲಾ ಎಡರನ್ನು ತುಳಿದು ನುಗ್ಗುತ್ತಾ ಇರುತ್ತಾನೆ. ಲೇಖಕನೂ ಹಾಗೆಯೇ. ಸಮಾಜದ ಜನರು ಆದರ್ಶವ್ಯಕ್ತಿಯ ಜೀವನವನ್ನು, ಬರಹವನ್ನು ಲೆಕ್ಕಿಸದೆ, ಟೀಕಿಸುತ್ತಾರೆ. ಮಾನವರ ಸಂಕುಚಿತ ಭಾವನೆಯನ್ನು, ದಾಸ್ಯಪ್ರವೃತ್ತಿಯನ್ನು ತಡೆದು ಶುಚಿಗೊಳ್ಳಿಸಲು ಲೇಖಕ ಯತ್ನಿಸುತ್ತಲೇ ಇರುತ್ತಾನೆ. ಲೇಖಕ ದಾರಿದ್ರ್ಯವನ್ನು ಅನುಭವಿಸಿ, ಕೀಟಲೆಗೆ ಸಿಕ್ಕಿ ಈ ಲೋಕದಿಂದ ಪಾರಾದಮೇಲೆ; ಜನರು ಲೇಖಕನ ಅಮರಕೃತಿಯನ್ನು ಎತ್ತಿ ಓದಿ, ಕವಿಯ ನೆನಪಿಗಾಗಿ, ಗೌರವ ತೋರುವುದಕ್ಕಾಗಿ ಸ್ಮಾರಕಮಂದಿರ ಕಟ್ಟುತ್ತಾರೆ. ಅವನು ಜೀವಂತನಾಗಿದ್ದಾಗ್ಗೆ, ಲೆಕ್ಕಿಸುವವರು ಇರುವುದೇ ಇಲ್ಲ. ಜನರ ಮೂಢತನವನ್ನು ಕಳೆದು, ಒಳ್ಳೆಯದಾರಿ ತೋರುವ ಲೇಖಕನಿಗೆ ಇತರರು ಯಾವರೀತಿ ಸನ್ಮಾನ ಮಾಡುತ್ತಾರೆ?

ಬರಹಗಾರ ಧರ್ಮಾಭಿಮಾನಿ, ಯಾವ ಹೆಚ್ಚಿನ ಸುಖ, ಯೋಗ್ಯತೆಗಾಗಿ ಕೃತಿಯ ರಚನೆಯಲ್ಲಿ ತೊಡಗಿ ಜೀವರಕ್ತ ಬಸಿಯಬೇಕು? ಈ ಎಲ್ಲಾ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟ. ಕಾಂತನ ಜೀವದ ಕಣ್ಣುಗಳು

ಎರಡು. ಒಂದನೆಯದು ಲೇಖಣಿ, ಎರಡನೆಯದು ಪ್ರೇಯಸಿ ಅಲಕಾ. ಈ ಎರಡು ಜೀವಂತ ಕಣ್ಣುಗಳಿಂದ ಎಷ್ಟೋ ಕೃತಿಕಿರಣಗಳು ಹೊರ ಬಿದ್ದವು. ಒಂದು ಪ್ರಾಣಕ್ಕೆ ಮತ್ತೊಂದು ಪ್ರಾಣ ಗಂಟು, ಒಂದು ಜೀವ ಮತ್ತೊಂದು ಜೀವವನ್ನು ಮಿಡಿಯುತ್ತದೆ ಯೆನ್ನುತ್ತಾರೆ. ಕಾಂತನ ಕಥೆಯೂ ಹಾಗೆಯೇ. ನಾದಬ್ರಹ್ಮನಿಗೆ ಮುಖಗಳು ಹಲವು. ಜೀವಕ್ಕೂ ಹಾಗೆಯೆ. ಸತ್ಯಮುಖಗಳನ್ನು ಕಂಡ ಕಣ್ಣು, ಜೀವದ ಸದುಪಯೋಗವನ್ನು ಬಯಸುತ್ತದೆ. ಸತ್ಯದ ಅಭ್ಯಾಸ ಜೀವನಾಶಕ್ಕೆ ಕಾರಣವಾಗುತ್ತದೆ. ಸತ್ಯಕ್ಕೆ, ನಿಜವಾದ ಅನುಭವಕ್ಕೆ ಗಂಟುಬಿದ್ದ ಲೇಖಕ, ತಾನು ಕಂಡ ಅಮೂಲ್ಯ ವಸ್ತುವನ್ನು ಇತರರಿಗೆ ಹಂಚಲು ಯತ್ನಿಸುತ್ತಾನೆ. ಕಾಂತನದೂ ಇದೇ ಮಾದರಿ.

ಕೋಟಲೆಗಳು ಅನೇಕ ಸಾರಿ ಬರುತ್ತವೆ. ಅವುಗಳು ಶಕ್ತಿವರ್ಧಕ ಔಷಧವೆಂದು ಕವಿ ಸಾರುತ್ತಾನೆ. ಶಕ್ತಿವರ್ಧಕ ಔಷಧಿಯ ವಾಸನೆ ಕಹಿಯೆ! ಕಹಿವಾಸನೆ ಹೊಸಶಕ್ತಿಯಿತ್ತು, ತ್ರಾಣಿಗಳನ್ನಾಗಿ ಮಾಡುವುದಿಲ್ಲವೆ? ಹಲವು ಸಾರಿ ಕಾಂತ, ಅಲಕಾವಿನ ಸ್ನೇಹದಿಂದ ಸ್ಫೂರ್ತಿ ಹೊಂದುತ್ತಾನೆ. ಆಗ ಅವನ ಲೇಖಣಿಯಿಂದ ಹೊಸಕಿರಣ ಕೃತಿಯೊಂದು ಹೊರಬೀಳುತ್ತದೆ.

ಮಾನವ ದೊಡ್ಡ ಮಹಲೊಂದನ್ನು ಕಟ್ಟಬಹುದು. ಆ ಮಹಲಿನಲ್ಲಿ ತನಗೆ ಬೇಕಾದ ವಸ್ತುಗಳನ್ನೆಲ್ಲಾ ಅವನು ಸಂಗ್ರಹಿಸಿಕೊಳ್ಳಬಹುದು. ಮಹಲೊಂದೇ ಅಲ್ಲ, ಮನೋಹರವಾದ ಭವನವನ್ನು ಕೂಡ ಕಟ್ಟಬಹುದು. ಕಟ್ಟಿ, ಭದ್ರವಾದ ಗೋಡೆಯಿಂದ ಸುಂದರಭವನವನ್ನು ಎಚ್ಚರಿಕೆಯಿಂದ ಕಾಪಾಡಿಕೊಳ್ಳಬಹುದು. ಹಾಗೆಯೇ ಭವ್ಯ ದೇವಾಲಯ ಕಟ್ಟಿ, ಮುಗಿಲು ಮುಟ್ಟುವವರೆಗೆ ಗೋಪುರವನ್ನು ಕಟ್ಟಬಹುದು. ಮಹಲು, ಭವನ, ದೇವಾಲಯ ಕಟ್ಟಲು ಹೊರಟ ಶಕ್ತಿವಂತ; ನಿಜವಾದ ಸರಳವಾದ ತನ್ನದೇ ಆದ ಸ್ವಂತಮನೆಯನ್ನು ಕಟ್ಟಿಕೊಳ್ಳಲಾರ. ಏಕೆ? ಸರಳವಾದ ಮನೆ ಸುಲಭದಲ್ಲಿ ಕಟ್ಟಲಾಗುವುದಿಲ್ಲ. ಎಲ್ಲಿಲ್ಲದ ಅಡ್ಡಿಬಂದು, ಕಟ್ಟಲು ತಡೆ ಮಾಡುವುದು. ಅನೇಕ ದಿವ್ಯ ಚಿತ್ರಗಳನ್ನು ಸೃಷ್ಟಿಸಿದ ಕವಿ ಕಾಂತ, ಶಕ್ತಿ ಪ್ರದರ್ಶನ ತೋರಿದಂತಹ ವ್ಯಕ್ತಿ, ತನ್ನ ಸ್ವಕೀಯ ವಿಚಾರವನ್ನು

ಸಮಸ್ಯೆಯನ್ನು ಸುಲಭವಾಗಿ ಬಿಡಿಸಿಕೊಳ್ಳಲಾರದೆ ಹೋದ.

ಸ್ವಂತಮನೆ ಕಟ್ಟಿಕೊಂಡು ಮಾನ್ಯನಾಗಿ ಬಾಳಬೇಕು. ಬಾಳಿಗೆ ದೀವಿಗೆಯಾಗಿ, ಹಣತೆಯಾಗಿ ಗೃಹಿಣಿ ನಿಲ್ಲಬೇಕು. ಅಂತಃಶುದ್ಧಿಯುಳ್ಳ ನೀತಿವಂತರಿಂದಲೇ ನಿಜವಾದ ಗೃಹ ನಿರ್ಮಾಣವಾಗುವುದು. ಚಿರದಯಿ ಅಲಕಾ ಬಹಳ ದಿನದಮೇಲೆ ಕಾಂತನ ಗೃಹವನ್ನು ಶೋಭಿಸಲು ನಿಂತಳು. ಅವನ ಚನ್ನೆ, ಚೈತನ್ಯದಾಯಿ ಬೆಂಬಲದಿಂದ, ಕಾಂತ ಖ್ಯಾತಿಗಳಿಸಿದ. ಉತ್ತಮಕೃತಿಯನ್ನು ನೇಯ್ದು. ಹೆಚ್ಚಾಗಿ ವಿಷಮಯ ವಿಶ್ವದಲ್ಲಿ, ಹೆಚ್ಚಿನ ಪ್ರಮಾಣದಲ್ಲಿ ದುಡಿದು ಮಾನನೀಯನಾದ. ಹೇಗಾದ? ಅಲಕಾ ಒಮ್ಮನಸ್ಸಿನಿಂದ ಅವನೊಂದಿಗೆ ನಿಂತಮೇಲೆಯೇ!

೩

ಆನಂದರಾಯ ಕಾಂತನ ಪಿತೃ. ಇವರನ್ನು ಮೊದಲು ಪರಿಚಯ ಮಾಡಿಕೊಳ್ಳೋಣ. ಕಾಂತನ ಹೃದಯವನ್ನು ಅಪಹರಿಸಿದ ಅಲಕೆಯಂತೆ, ಸಾಧ್ವಿಯೊಬ್ಬಳು ಆನಂದರಾಯರ ಹೃದಯವನ್ನು ಸೂರೆಗೊಂಡಿದ್ದಳು. ಆದರೆ, ಪ್ರೇಮಾರ್ಪಣ ಮುಗಿಸಿ ಇಹಲೋಕ ಬಿಟ್ಟಿದ್ದಳು. ಆನಂದ ರಾಯರ ನಿರಭ್ರ ನೀಲವರ್ಣದ ಸೊಗಸಿನ ಸಾಮ್ರಾಜ್ಯಕ್ಕೆ ರಾಣಿ ಯಾಗಿದ್ದವಳು, ಕೈಬಿಟ್ಟಿದ್ದಳು. ರಾಯರು ಗತಕಾಲದ ಸ್ಮೃತಿ ಚಿತ್ರ ವನ್ನು ಮರೆತು, ಹೃದಯ ಇರಿಸಿಕೊಳ್ಳುವುದನ್ನು ಕ್ರಮೇಣ ಕಡಿಮೆಮಾಡಿ ಕೊಂಡರು. ಇನಿಯಳನ್ನು ಕಳೆದುಕೊಂಡ ಬೇಗೆ, ನಾಲಿಗೆಯನ್ನು ಬಂಧಿಸಿತ್ತು.

ಮನಸ್ಸೆಂಬ ದುಂಬಿ; ಜಾತಿ ಕುಲಮಾನ, ಸಮದರ್ಶನ ನೋಡದೆ ಹೃದಯ ಗುಹೆ, ವಿಮಲನಯನದ ನೋಟ, ಬೇಡವೆಂದಾಗ ಆಗುವುದೇನು? ಹೃದಯಪದ್ಮ ಪಾರಾಯಣೆಯನ್ನು ಕಳೆದುಕೊಂಡಿದ್ದ ರಾಯರು, ಗಗನದಲ್ಲಿ ವಿಹರಿಸುವ ಹಕ್ಕಿಯಂತೆ ಆಗಿಹೋದರು. ಒಮ್ಮೆ ಭಾವೋನ್ಮಾದದಲ್ಲಿ ಮುಳುಗಿ, ಪಾಪಕಲ್ಮಷ ಕಳೆದುಕೊಳ್ಳಲು ದೂರ ಹೊರಟುಬಿಡುವಾ ಎಂದು ಯೋಚಿಸುತ್ತಿದ್ದರು. ಮತ್ತೊಂದು ಸಾರಿ ಮದುವೆ, ನಡೆಯದು; ಇನ್ನು ವಿರುದ್ಧವಿಚಾರದ ಕಣಜದ ಬಾಗಿಲು ತೆರೆಯಬಾರದೆಂದು

ತೀರ್ಮಾನಿಸಿದರು. ಕೊನೆಗೆ ಈಶ್ವರಪ್ರಾಪ್ತಿ ದಾಂಹಿಡಿಯಲು ಹವಣಿಸಿದರು.

ಆನಂದರಾಯರ ಹಾದಿಯೇ ಬೇರೆಯಾಯಿತು. ಅವರು ಕ್ಷುದ್ರ ಹೃದಯದ ಭರದ ಬಿರುಗಾಳಿ ಅಡಗಿಸಿಕೊಳ್ಳಲು ಹಿಡಿದದಾರಿಯನ್ನು ಕಂಡ ಜನರು, ನಾನಾಬಗೆಯಾಗಿ ಆಡಿಕೊಳ್ಳುತ್ತಿದ್ದರು. ಭಿನ್ನತತ್ವದ ವಿಚಾರವೇಕೆ? ಆನಂದರಾಯರ ವರ್ತನೆ ವಿಸ್ಮಯಾಶ್ಚರ್ಯಕರವಾಯಿತು. ಸಾಕ್ಷಾತ್ಕಾರದ ಹಾದಿ ಹಿಡಿಯಲು ಹೋಗಿ ಅವರು, ದಿವಿಜಪುರ ಬಿಟ್ಟರು; ನಾನಾಬಗೆಯಾಗಿ ಆಡಿಕೊಳ್ಳುತ್ತಿದ್ದ ಜನರಿಗೆ ಏನೂ ಹೇಳದೆ, ತಮ್ಮ ಏಕಮಾತ್ರ ವಯಸ್ಸಿಗೆ ಬಂದಿದ್ದ ಕಾಂತನ ಕೈಗೆ ಕೋಶದ ಕೀಲಿಯನ್ನೊಪ್ಪಿಸಿ; ಅವನನ್ನೇ ಉತ್ತರಾಧಿಕಾರಿಯನ್ನಾಗಿ ಮಾಡಿ ಹೊರಟುಹೋದರು.

ಆನಂದರಾಯರ ವೈಶಾಲ್ಯತೆಯಲ್ಲಿ ಬೆಳೆದು ನಿಂತಿದ್ದ ಕಾಂತ. ಅನಂತಕೋಶಕ್ಕೆ ಹಕ್ಕುದಾರನಾಗಿ ನಿಂತ. ಇನ್ನು ಕಾಂತ ಒಬ್ಬನಾಗಿ, ಪ್ರೇಮಬಿಂಧುವಾಗಿ, ಕೃಪಾಮಯಿ, ಪ್ರಸನ್ನಮಯಿ, ಅನಂತಾನಂದಮಯಿ ಅಲಕಾವೊಂದಿಗೆ ನಿಂತ ಬಗೆಯನ್ನು ತಿಳಿಯೋಣ.

ಅಜ್ಞಾತದಲ್ಲಿ ನಿಂತು, ಕುಲಶೀಲದಲ್ಲಿ ಬೆಳಗಿ, ದೈವನಿರ್ಮಿತವಾದ ಮೃದುಮಧುರವಾದದನಿ, ಭಾವಸುಲಭವಾದ ಮಿದುತನ ಕಾಂತನ ಹೃದಯದಲ್ಲಿ ಮನೆಮಾಡಿಕೊಂಡಿತ್ತು. ಅವನ ಇಚ್ಛೆಯೋಗಭೂಮಿಯಲ್ಲಿ ಫಲಫಲಿಸಲಿಕ್ಕಾಗಿಯೇ ಅಲಕಾ ಸರೋಜಸುಂದರಿ ಅವನಿಗೆ ದೊರಕಿರಬೇಕು ಎನಿಸುತ್ತದೆ. ಕೋಶಕ್ಕೆ, ಅಧಿಕಾರಕ್ಕೆ ಕಾಂತ ನಿಂತಾಗ; ರಾಜ್ಞಿಯಾಗಿ ಅಲಕಾ ನಿಂತು ಕೃತಕೃತ್ಯಳಾದಳು. ಪ್ರಣಯದ ಬೀಜಾವಾಪದ ವಿಚಾರ ಎಲ್ಲಿಗೆ ಮುಗಿಯುವುದು?

ಮನುಷ್ಯ ವ್ಯಕ್ತಿತ್ವಕ್ಕಾದರೂ ಎರವಾಗಬೇಕು, ಇಲ್ಲದಿದ್ದಲ್ಲಿ ಸಮಾಜದ ಪಾದಾಗಾತಕ್ಕಾದರೂ ಆಹುತಿಯಾಗಬೇಕು. ಆನಂದರಾಯ ಸಮಾಜದ ಪಾದಾಗಾತಕ್ಕೆ ಹೇಗೆ ಸಿಕ್ಕಿಬಿದ್ದು ಹಾಳಾದ? ಅವನು ತನ್ನ, ಬದುಕಿನಕಲಶ ಉರುಳಿಹೋಯಿತೆಂದು ಸ್ವಲ್ಪಕಾಲದವರೆಗೆ ಹಲುಬಿದ. ತನ್ನ ಜೀವದ ಅಭ್ಯುದಯಹಾದಿ ಮುಗಿಯುತೆಂದು ಗೋಳಾಡುತ್ತಿದ್ದ

ಆನಂದರಾಯ; ವೈರಾಗ್ಯನಿಧಿಯೆನಿಸಿ ಉಳಿದಕಾಲವನ್ನು ಪಾರಮಾರ್ಥಿಕ ದಲ್ಲಿ ಕಳೆಯಲು ಯೋಚಿಸಿದ. ಸುಖೋಪಭೋಗಗಳು ಕ್ಷಣಮಾತ್ರ ವಾದದ್ದು ಎಂದು ತೀರ್ಮಾನಿಸಿದ ಆನಂದರಾಯ, ಜನರ ಕಣ್ಣೆದುರಿಗೆ ಹಳೆಯಹೃದಯದ ಹಸಿದ ಹಾಡನ್ನೇ ಪುನಃ ಹಾಡಿಬಿಟ್ಟ. ಮನಸ್ಥೈರ್ಯ ವಿಲ್ಲದವರಿಗೆ, ಬದುಕಿನ ಚಕ್ಕಡಿಗೆ ಗೊತ್ತಾದ ದಾರಿಯೊಂದಿಲ್ಲದಿದ್ದರೆ ಆಗುವುದೇನು? ಅದಕ್ಕೆ ಗುರಿಯೇ ಇರುವುದಿಲ್ಲ, ಮೋಕ್ಷವೂ ಸಿಗುವುದಿಲ್ಲ. ಆನಂದರಾಯ ಜನರ ಕಣ್ಣಿಗೆ ಒಮ್ಮೆ ಯೋಗಿ, ಮತ್ತೊಮ್ಮೆ ಭೋಗಿ ಯಾಗಿ ಕಾಣಿಸಿಕೊಂಡು ಟೀಕೆಗೆ ಕಾರಣನಾದ.

ಚರಿತ್ರಹೀನನಾದ ಆನಂದರಾಯನಿಗೆ ದಿವಿಜಪುರದವರು ಕಲಂಕ ಹಚ್ಚಿದರು. ಪಿಸುಮಾತು ಪ್ರತಿಧ್ವನಿಸಿತು. ಆನಂದರಾಯ ಊರುಬಿಟ್ಟು ಪರಾರಿಯಾದ. ಗುಲ್ಲು ಅಡಗಿದಮೇಲೆಯೇ, ಆನಂದರಾಯನ ಕುಮಾರ ಕಾಂತ ಮನೆಬಿಟ್ಟು ಧೈರ್ಯದಿಂದ ಹೊರಗೆ ಬರುವಂತಾದುದು. ಆನಂದ ರಾಯ ಎಡವಿಬಿದ್ದನೋ ಅಥವಾ ಜನರು ಅವನನ್ನು ಹೀಯಾಳಿಸಿದರೋ ತಿಳಿಯದು. ಅವನು ಊರುಬಿಟ್ಟು ಪಲಾಯನಮಾಡಲು ದಿವಿಜಪುರ ದವರೆ ಕಾರಣರಾಗಿದ್ದರು.

ತಂದೆ ಊರುಬಿಟ್ಟು ಹೊರಟುಹೋದಮೇಲೆ ಮಗನೇನು ಮಾಡ ಬೇಕು? ಆನಂದರಾಯನ ನೆಲೆ ಕಂಡುಹಿಡಿಯಲು ಕಾಂತ ಬಹು ಪ್ರಯಾಸ ಪಟ್ಟ. ಮಾಡಿದ ಸಾಹಸವೆಲ್ಲಾ ನಿಷ್ಫಲವಾಯಿತು. ಕಾಂತ ಕೈಬಿಟ್ಟ. ಕೆಲವು ದಿನ ಚಿಂತನೆಯಲ್ಲಿಯೇ ಕಾಲಕಳೆದ. ಎಲ್ಲವೂ ಮುಗಿಯಿತು. ಏಕಾಂಗಿಯಲ್ಲಿ ದಿವಿಜಪುರದಲ್ಲಿ ಅಪ್ಪ ಬಿಟ್ಟುಹೋದಮನೆಯಲ್ಲಿ ನಿಂತು ಬಿಡುವುದು ಎಂದು ದೃಢಮನಸ್ಸುಮಾಡಿದ. ಕಾಂತನಿಗೆ ಒಂದು ರೀತಿ ಅನ್ಯಾಯ, ಇನ್ನೊಂದು ಬಗೆಯಲ್ಲಿ ತೃಪ್ತಿ ಆನಂದರಾಯ ಬಿಟ್ಟುಹೋಗಿದ್ದ. ಕಾಂತನಿಗೆ ಹೊಟ್ಟೆಗಾಗುವಷ್ಟು ಅನ್ನವನ್ನು ಬಿಟ್ಟಿದ್ದಲ್ಲದೆ; ಅಪಕೀರ್ತಿ ಯನ್ನು ಸಹ ಆನಂದರಾಯ ಬಿಟ್ಟಿದ್ದ. ಕಾಂತನಿಗೆ ಇರಲಿಕ್ಕೆ ಮನೆ, ಅನ್ನಕ್ಕೆ ಸ್ವಲ್ಪಭೂಮಿ ದಿವಿಜಪುರದಲ್ಲಿತ್ತು. ಇನ್ನು ಮುಂದುವರಿಯೋಣ.

ಸಂಸ್ಕೃತಿ ರಾಷ್ಟ್ರದ ಮುಖ್ಯ ಜೀವಾಳವಲ್ಲವೆ? ಬಂಡುಗಾರರು ಯೆಂದರೆ, ರಾಜ್ಯದಲ್ಲಿ ದಾಂದಲೆಯೆಬ್ಬಿಸಿದ ಪಟುಗಳಷ್ಟೇ ಅಲ್ಲ; ತಮ್ಮ

ಬರಹದಿಂದ ಜನತೆಯಲ್ಲಿ ಉತ್ಸಾಹಹುಟ್ಟಿಸಿ ದಾಂದಲೆ ನಡೆಸಿದ ಜನರೂ ಬಂಡುಗಾರರೆ! ಕಾಂತ ಬಂಡಾಯ ಎಬ್ಬಿಸಿದ ಪಟುವೆ. ಅವನು ಯೋಧ ನೆನಿಸಲಿಲ್ಲ, ಕತ್ತಿಹಿರಿದು ನಿಲ್ಲಲಿಲ್ಲ; ಸಂಸ್ಕೃತಿಯೆಂಬ ಮಸೆಕಲ್ಲಿಗೆಸಿಕ್ಕಿ ನುರುಗಿ ನಿಂತಿದ್ದ.

ಸಮಾಜ, ಜನತೆ, ಮುಂತಾದ ಸಕಲಪ್ರಪಂಚಕ್ಕೆ ಮನ್ನಣೆ ಕೊಡುವವರುಯಾರು? ಲೇಖಕ ಕಾಂತನ ಆಧಾರ, ಜೀವನಕಥೆಯಾಗಿತ್ತು. ಜ್ಞಾನಭಾಂಡಾರ ಬೆಳೆಯುವುದು ಎಂದರೆ, ಶ್ಲಾಘನೀಯವಾದ ವಿಚಾರ ಗಳನ್ನು ಮಸೆದು, ಸತ್ಯವನ್ನು ಕಾಣುವುದೇ ಅಲ್ಲವೆ? ಜನತೆಯ ರೀತಿನೀತಿ, ಮನುಷ್ಯರ ಹೃದ್ಭಾವನೆಗಳೂ, ಅವರ ಕುಲುಷಿತ ಹೃದಯಗಳೂ, ಪ್ರೇಮೀ ಪ್ರೇಮಿಗಳ ಒಡನಾಟ, ಈ ವಿಷಯಗಳ ಛಾಯಾಗ್ರಹಣ ಲೇಖಕ ಕಂಡಿರ ಬೇಕಲ್ಲವೆ? ಕಾಂತ ಪ್ರೌಢಯುವಕ ಲೇಖಕ, ಇವನಿಗೆ ಶಿಕ್ಷಣಪ್ರಸಾರ ಚನ್ನಾಗಿಯೇ ಆಗಿದ್ದಿತು. ಲೇಖಣಿಯ ಉಪಯುಕ್ತತೆ ಚನ್ನಾಗಿಯೇ ಅವನಿಗೆ ತಿಳಿದಿತ್ತು. ನೀತಿರೀತಿ ಮತ್ತು ಸಮಾಜದ ವೈಪರೀತ್ಯವನ್ನು ಯೋಗ್ಯವಾಗಿ ಕೂಲಂಕಷ ವಿಚಾರಮಾಡಿದ್ದ.

ಲೇಖಣಿ ವಿಚಿತ್ರ ಶಕ್ತಿಯುಳ್ಳ ಆಯುಧ. ಕಾಂತ ಲೇಖಣಿಯ ಹಿಡಿತಕ್ಕೆ ಹೇಗೆ ಸಿಕ್ಕಿಬಿದ್ದ? ಉದರ ತಣ್ಣಗಿದ್ದು, ಶಾಂತಿನೆಲೆಯೊಂದು ಅವನಿಗಿತ್ತು. ಅಪ್ಪಬಿಟ್ಟುಹೋದ ಸಿರಿಯೊಂದಿಗೆ, ಅಪಕೀರ್ತಿಯು ಜತೆಗೆ ಕಾಂತನಿಂತು, ಸುಧಾರಿಸಿಕೊಳ್ಳಲು ಯತ್ನಪಟ್ಟ. ಕವಿ, ಲೇಖಕ ತನ್ನ ಬಂಡಾಯ ಯೋಜನೆ ಧೋರಣೆಗಾಗಿ ಸಾಹಸಪಡುತ್ತಾನೆ. ಇತರರೊಂದಿಗೆ ವೈಮನಸ್ಸಿಗೆ ಕಾರಣನಾಗುತ್ತಾನೆ. ಲೇಖಕ; ತ್ರಾಸದಾಯಕವಾದ, ಭೀಕರವಾದ, ಸತ್ಯಸೃಷ್ಟಿಗೆ ಮನಸ್ಸುಕೊಡುತ್ತಾನೆ. ಕಾಂತನ ಹೆಮ್ಮೆ ಹೃದಯವೂ ಸತ್ಯಸೃಷ್ಟಿಗೆ ಆಸೆಪಟ್ಟಿತು. ನೂತನಜಗತ್ತು ಸೃಷ್ಟಿಮಾಡ ಬೇಕೆಂದು ಕಾಂತ ಮನಸ್ಸುತಳೆದ. ಮಾನವ ಹೃದಯವನ್ನು ಲೆಕ್ಕಿಸುವಾಗ ಮಾನಾಪಮಾನವನ್ನೂ ಅನ್ಯಾಯವಿವರಣೆಯನ್ನೂ ಲೇಖಕ ಶೋಧಿಸಿ, ಲೋಪದೋಷಗಳನ್ನು ಎತ್ತಿಡಬೇಕು. ಈ ಲೇಖಕ ಜನತೆಯ ವಿಕ್ರೋಶಕ್ಕೆ ಕಾರಣನಾಗಿಯೇ ಆಗುತ್ತಾನೆ.

ಬಂಡುಗಾರನ ಹೃದಯ ಹೇಗಿರುತ್ತದೆ? ಅವನ ಹೃದಯ ಬರೀ

ಗಕ್ತಮಾಂಸ, ಎಲುಬುಗಳಿಂದ ಮಾತ್ರವೇ ರೂಪಗೊಂಡಿರುವುದಿಲ್ಲ. ಅವನ ಹೃದಯದಲ್ಲಿ ಧ್ಯೇಯವೆಂಬ ಗಡಸುಕಲ್ಲು, ವಜ್ರ ಅಗಾಧವಾದ ಗಣಿಯ ತಳದಲ್ಲಿ ಅಡಗಿರುವಂತೆ ಅಡಗಿರುತ್ತದೆ. ಗಡಸುಕಲ್ಲಿನಂತೆ ಹೃದಯದಲ್ಲಿ ಅಡಗಿರುವ ಧ್ಯೇಯ, ದಾರಿಗಾಣಬೇಕಾದರೆ ಬಹಳ ಏಟು ತಿನ್ನಬೇಕು. ಕಠೋರಹೃದಯ, ಉಕ್ಕಿನಂತಹ ಹೃದಯ, ಮಾನವರ ಹೃದಯವನ್ನೇ ಅಲ್ಲ ಜೀವವನ್ನೇ ಅಲ್ಲಾಡಿಸಿ ನಡುಗಿಸುವ ಹೃದಯ ಎಂತಹದಿರಬೇಕು? ಉಕ್ಕಿನಹೃದಯವಾಗಿರಬೇಕು. ಕಾಂತನ ಎದೆ, ಉಬ್ಬದೆಯು ಹಾಗೆಯೇ ಯಿತ್ತು. ಲೇಖಕ ಕಾಂತ, ತನ್ನ ಲೇಖಣಿಯಿಂದ ಮೊನೆಯಾದ ವಿಚಾರ ವನ್ನು ಎತ್ತಿ, ಜನರಿಗೆ ಹಿಡಿಸುವಂತೆ ಬರೆಯುತ್ತಿದ್ದ. ಹೆಚ್ಚಾಗಿ ಹೃದಯ ಬಂಧನದ ವಿಚಾರವೇ ಅವನ ಲೇಖಣಿಯಿಂದ ಹೊರಬಿದ್ದಿತ್ತು. ಅದರೊಂದಿಗೆ ತಪ್ಪುಒಪ್ಪುಗಳ ಚರ್ಚೆಯನ್ನು ನಿರಾಂತಕವಾಗಿ ತೀರ್ಮಾನಿಸುತ್ತಿದ್ದ.

೪

ಅಲಕಾ ಸೊಗಸಿನರಾಶಿ. ಅವಳ ಮನಸ್ಸಿನಲ್ಲಿ ಮಲ್ಲಿಗೆಯು ಚನ್ನಾಗಿಯೇ ಅರಳಿತ್ತು. ಸೊಗಸಾದ ಮಲ್ಲಿಗೆ ಸುಂದರಮುಡಿಯನ್ನು ಸೇರಿ ಶೋಭಿಸುತ್ತದೆ. ಅಲಕಾ ತನಗೆ ಲಭ್ಯವಿದೆಯೋ ಇಲ್ಲವೋ ಎನ್ನುತ್ತಿದ್ದಳು. ಸಮಾನ ಹಕ್ಕಿನ ದಿನಗಳಲ್ಲಿ, ಚಲುವೆ ತನ್ನ ಹೃದಯಕ್ಕೆ ಚಲುವ ಅರಸನೇ ಸಿಗಬೇಕೆಂದು ಬಯಸಿದಲ್ಲಿ ತಪ್ಪೇನು? ತಮ್ಮ ಜೀವನ ಉತ್ತಮ ಪರಿಣಾಮದಿಂದ ಕೊನೆಗಾಣಲಿಯೆಂದು ಬಯಸುವುದು ಸರಿಯೆ; ಬಯಸಬೇಕಾದುದೂ ಸರಿಯೆ. ನಗುತ್ತ, ನಗಿಸುತ್ತ, ಲೋಕ ಮತ್ತು ಹೃದಯವನ್ನೇ ನಗಿಸಿ ಬೆಳಗುವ ಚಲುವೆಯರು ಇರುವರಲ್ಲವೆ! ತಮಗೂ ಅಂತಹ ಚಲುವೆಯ ಸಹವಾಸ ಅತ್ಯಗತ್ಯವೆಂದು ತಿಳಿದ ಯುವಕರೂ ಇದ್ದಾರೆ. ಪ್ರೇಮದ ಇತಿಹಾಸ ಹೊಸದಾಗಿ ಬರೆಯಲು ಹೊರಟ ಕಾಂತ, ಅಂತಹ ಚಲುವೆಯನ್ನೇ ಬಯಸಿದ. ಬಯಸಿದ ಮಾತ್ರವಲ್ಲ; ಹೃದಯ ಚಳವಳಿ, ಪ್ರೇಮದ ಏಕೀಕರಣ ವಿಚಾರವನ್ನು ಪ್ರಸಾರಮಾಡಿದ.

ಅಲಕಾ "ಜಗತ್ತಿನಲ್ಲಿ ನನಗೆ ಏನಿಲ್ಲದಿದ್ದರೂ ಯಾರಿಲ್ಲದಿದ್ದರೂ

ತಾಯಿಯಿರಲಿ" ಎಂದು ಬಾಲ್ಯದಲ್ಲಿ ಆಶಾಂಕುರ ಬೆಳೆಸಿದ್ದಳು. ಬಾಲ್ಯದಲ್ಲಿ ತನಗೆ ತಾಯಿಯೇ ಕಲ್ಯಾಣಮಯಿ ಎಂದು ತಿಳಿದಿದ್ದಳು. ಬಾಲ್ಯ ಹೊರಳಿ ಯೌವನದ ಹೊಸ್ತಿಲು ಮೆಟ್ಟಿದಾಗ; ಅವಳ ಆಸೆ ಮೊಳೆತು ಚಿಗಿಯಿತು. ಆಶೆಯೇ ಹೂವಾಗಿಬೆಳೆಗಿತು. ಹೂವು ಹಾಳಾಗಿ ಬಾಡಿ ಬೀಳುವುದಕ್ಕೆ ಮುಂಚೆಯೇ, ಕಾಂತ ಚೆಲುವಾದ ಹೂವನ್ನು ಕೈಗೆ ಎತ್ತಿಕೊಂಡು ಹೃದಯಕ್ಕೆ ಅಪ್ಪಿಕೊಂಡ.

ಅಲಕಾ ತಾಯಿಯ ಹೆಸರು ಚಂದ್ರಿಕಾ. ಚಂದ್ರಿಕೆಯೇ ಅಲಕೆಯನ್ನು ಬದುಕಿಸಿ, ಚೇತರಿಸಿ, ಚಲುವನ್ನೆರೆದ ಪ್ರಾಣಿ. ಸಮಾಜದ ಕುರುಡು ಕಣ್ಣು, ಧೋರಣೆಗೆ ಚಂದ್ರಿಕೆ ಅಲಕೆಯೊಂದಿಗೆ ಬಿದ್ದಿದ್ದಳು. ಸುಲಭವಾಗಿ ಸಮಾಜದ ಕುರುಡುಕಣ್ಣಿನ ಸೆಳೆತದಿಂದ ಯಾರೂ ಬಿಡಿಸಿಕೊಳ್ಳಲಾರರು. ಹೀಗೆಂದಮೇಲೆ, ನಿರಾಶ್ರಿತಳಾಗಿ ನಿಂತ ಚಂದ್ರಿಕೆ ಧೋರಣೆಯನ್ನು ಎದುರಿಸಲಾರದೆ ಹೋದಳು. ಎಷ್ಟುದಿನ ತನ್ನ ಜನರ ಮತ್ತು ನೆರೆಯವರ ಉಪೇಕ್ಷೆಯಲ್ಲಿ ಜೀವ ಬಿದ್ದಿರುತ್ತದೆ. ಹೋಮಕುಂಡ, ಅಗ್ನಿಕುಂಡದಲ್ಲಿ ಬಿದ್ದು ಪ್ರಾಣಕಳೆದುಕೊಳ್ಳಲು ಈ ಎರಡುಜೀವ ಇಷ್ಟಪಡಲಿಲ್ಲ. ತಮಗೆ ತೊಡಿಸಿದ ಬೆದರಿನ ಸೆರೆಯಿಂದ ಬಿಡಿಸಿಕೊಳ್ಳಲಾರದೆ, ಉಳಿಸಿಕೊಡರೀ ಯೆಂದು ಕೈನೀಡಲು ಇಚ್ಛೆಯಿಲ್ಲದೆ, ಬಹಳಕಾಲದವರೆಗೆ ಹೆಣಗಿದರು.

ಕಾಲ ಉರುಳುತ್ತಲೇ ಇತ್ತು. ಚಂದ್ರಿಕೆಯ ಆಯಸ್ಸು ಸವೆದು, ಉಸಿರು ಮೆತ್ತಗಾಗುತ್ತಿತ್ತು. ತಾನು ಇನ್ನು ಮೃತ್ಯುವಿಗೆ ಎರಗುವ ದಿನಗಳು ಬಹಳ ದೂರದಲ್ಲಿಲ್ಲವೆಂದು ಚಂದ್ರಿಕೆಗೆ ಅರಿವಾಯಿತು. ಆಗಲೇ ಅಲಕಾವಿನ ಸಂರಕ್ಷಣೆಯ ಭಾರದಮೌಲ್ಯ ಚಂದ್ರಿಕೆಗೆ ಗೊತ್ತಾಯಿತು. ಚಂದ್ರಿಕೆಗೆ ವಯಸ್ಸು ಅರವತ್ತು ಮೀರಿತ್ತು. ಅರವತ್ತುವರ್ಷದ ವೃದ್ಧೆಯೊಂದಿಗೆ ಅಲಕಾ, ದಿವಿಜಪುರದಲ್ಲಿ ನೆಲೆಯಿಲ್ಲದೆ ಸುತ್ತುತ್ತಿದ್ದುದು ಎಲ್ಲರ ಗಮನಕ್ಕೆ ಬಿದ್ದಿತ್ತು. ಅಲಕಾವಿನ ಬಾಳನ್ನು ಸಮಸ್ತ ಸಹಕಾರನೀಡುವ ಬಾಂಧವನ ಕೈಗಿತ್ತು, ಜಗತ್ತಿನಿಂದ ಪಾರಾಗಬೇಕೆಂದು ಚಂದ್ರಿಕೆ ಯೋಚಿಸಿದಳು. ಬಾಂಧವ ಸುಲಭದಲ್ಲಿ ಅವಳಿಗೆ ಸಿಕ್ಕುವನೇನು?

ಈ ವಯೋವೃದ್ಧಳ ದುಃಖವನ್ನು ಕಡಿಮೆಮಾಡಲು ಯಾವ ಧರ್ಮಬುದ್ಧಿಯವನು ಸಿಗಬೇಕು? ಅಲಕಾ ಚಿತ್ರಲೇಖೆಯೆ. ಈ ಲೇಖೆಯನ್ನು

ಚಿತ್ರದಲ್ಲಿ ಚಿತ್ರಿಸಿಕೊಳ್ಳುವವನೊಬ್ಬ ಬೇಕಲ್ಲ! ನಿಷ್ಠುರಸಮಾಜ, ಸ್ವಾರ್ಥ ಸಮಾಜ, ಸ್ವಂತಪ್ರಯೋಜನಕ್ಕಾಗಿ ಎಷ್ಟೆಷ್ಟೋ ಪಾಪಗಳನ್ನು ನಡೆಸುತ್ತದೆ. ಮನುಷ್ಯತ್ವದ ಭೂತದಯೆಯ ಜ್ಞಾನದ ಕಣ್ಣು ತೆರೆದಾಗ, ಮಾಡಿದ ಪಾಪಗಳ ಲೆಕ್ಕ ಆಗ ಕಾಣುತ್ತದೆ. ನಿಷ್ಠೂರಕ್ಕೆ ಸಿಕ್ಕಿಬಿದ್ದಿದ್ದ ಚಂದ್ರಿಕೆ ಯನ್ನು, ಅಲಕೆಯನ್ನು ಯಾರೂ ಲೆಕ್ಕಿಸುತ್ತಿರಲಿಲ್ಲ.

ಅಲಕಾ ದಾರಿದ್ರ್ಯವಧುವಾಗಿ ನಿಂತು, ತನ್ನ ದುರದೃಷ್ಟವನ್ನು ಹಳಿದುಕೊಳ್ಳುತ್ತಿದ್ದಳು. ಮನಸ್ಸು ಡೋಲಾಯಮಾನದಲ್ಲಿತ್ತು. ಅವಳಿ ಗಿನ್ನೂ ಹೃದಯಹುಲ್ಲೆಯ ನೆನಪು ಆಗಿರಲಿಲ್ಲ. ಪತಿ, ಪತಿಗೃಹ, ಪ್ರೇಮ, ಬಂಧನ, ಪ್ರೇಮಾರಾಧನೆ ಎಂಬ ನಾನಾ ಊಹೆಯಂತ ಮೋಹಮೇಖೆಯ ಪರಿಚಯ ಅವಳಿಗಾಗಿರಲಿಲ್ಲ.

ಇನ್ನು ಕಾಂತನ ವಿಚಾರ. ಅವನು ಊಹಾಸ್ವರ್ಗದಲ್ಲಿ ವಿಹಾರಿ ಯಾಗಿ ಸುಳಿಯುತ್ತಿದ್ದುದು ನಿಜ. ಅವನದೇ ರಾಜ್ಯ, ಅವನದೇ ನಿಧಿ, ಸರ್ವಸಮಸ್ತವಾಗಿದ್ದ ಕಾಲ. ಅವನ ಭಾವನಾಪ್ರಪಂಚದ ಮಿಳಿತಕ್ಕೆ ಸರಿಯಾಗಿ ಅವನಿಗಿನ್ನೂ ಅಲಕಾ ದೊರೆಕಿರಲಿಲ್ಲ. ಈ ಕಥೆಯ ಮೂಲಾ ಧಾರ, ಲೇಖಕ ಕಾಂತ ದಾರಿದ್ರ್ಯಲಕ್ಷ್ಮಿಯೆನಿಸಿದ ಅನುಪಮಸುಂದರಿ ಅಲಕಾವೊಂದಿಗೆ ಒಮ್ಮನಸ್ಕನಾಗಿ ನಿಂತಬಗೆಯೇ ಆಗಿದೆ. ಇವರಿಬ್ಬರೂ ಸರ್ವಾಭರಣರಾಗಿ ನಿಂತರು ಹೇಗೆ? ಯಾವ ಭೀಷಣಜ್ವಾಲೆ ಇಬ್ಬರನ್ನೂ ಕೂಡಿಸಿತು? ಕಾಂತ ಹೇಗೆ ಅಲಕಾವನ್ನು ಗೃಹದೇವತೆಯನ್ನಾಗಿ ಮಾಡಿ ಕೊಂಡ? ಸಮಾಜವೆಂಬ ಧರ್ಮದಾಸ್ಪತ್ರೆಯಲ್ಲಿ ಕಾಂತ-ಅಲಕಾ ಇಬ್ಬರೂ ಅಸ್ಪಷ್ಟ ಜನರಾಗಿ ಉಳಿದರು? ಕಾಂತ ಮನೋಶಾಂತಿಯಲ್ಲಿ ಉಳಿದಿದ್ದಾಗ, ಈ ಮುಖ್ಯ ಭಾವೋದ್ದೀಪಕ ರಾಗರಚನೆ ಜರುಗಿ, ಪ್ರೇಮಿಗಳ ಬೇಟಿ ಯಾಯಿತು? ಈ ವಿಚಾರ ತಿಳಿಯುವುದು ಮುಖ್ಯವಾಗಿದೆ.

ಮಯೂರಕ್ಕೆ ಶೋಭಾಯಮಾನವಾದ ಗರಿಗಳೂ ತೋಕೆಗಳೂ ಇರುತ್ತದೆ. ಅದರ ಕತ್ತಿನಲ್ಲಿ ಹೊಳಪಿನ ನೀಲವರ್ಣವಿರುತ್ತದೆ. ಅದೊಂದು ಬಿಂಕದ ಬೆಡಗಿನ ನಾಟ್ಯವಾಡುವ ಪ್ರಾಣಿ. ತುಂಬುದನಿಯಲ್ಲಿ ತರಂಗ ತರಂಗವಾಗಿ ನಾದ ಅದು ಹೊರಡಿಸುತ್ತದೆ. ಕಾಂತ ತನ್ನ ಆದರ್ಶ ಚಿತ್ರಾ ಕೃತಿಗಳನ್ನು ರೂಪಿಸುವ ಚಿತ್ರಗಾರನಷ್ಟೆ. ಹೆಣ್ಣು-ಗಂಡು ಜಗತ್ತಿನ

ಕ್ರೀಡಾಮಂಟಪದಲ್ಲಿ ಆಡುವ ಆಟವನ್ನೇ ಅವನು ಚಿತ್ರಿಸುತ್ತಿದ್ದುದು.

ಒಮ್ಮೆ ಯಾವುದೋ ರಚನೆಯಲ್ಲಿದ್ದಾಗ ನದಿನೀರದಲ್ಲಿ ಅಲಕಾ ಅವನಿಗೆ ಕಾಣಿಸಿಕೊಂಡಿದ್ದಳು. ನದಿಯಬಳಿ ಗುಂಪುಮರದ ನೆರಳಲ್ಲಿ ಕೂತು ಬರೆಯುತ್ತಿದ್ದ ಕಾಂತ, ತನ್ನ ಕನಸ್ಸಿನ ತವತಪೋವನದಲ್ಲಿದ್ದಾಗಲೇ ಅಲಕಾ-ಚಂದ್ರಿಕೆಯರನ್ನು ಮೊದಲ ಬಾರಿ ನೋಡಿದುದು.

ಪ್ರಪಂಚಬಳಗದಿಂದ ಗುಂಪೆಂಬ ಕತ್ತಲುಕೂಟದಿಂದ ಹೊರಗಾಗಿ, ಧವಳಕೀರ್ತಿ ಪಡೆಯಬೇಕೆನ್ನುವ ಮನುಜನಿಗೆ; ಮುಖ್ಯವಾಗಿ ದೀರ್ಘ ಪ್ರಯತ್ನ ಮತ್ತು ದಕ್ಷತೆ ಈ ಎರಡುಗುಣಗಳಿರಬೇಕು. ಅವನು ನಿಜವಾಗಿ ಶಾಂತಿಸತ್ವವನ್ನು ಕಂಡೇ ಇರಬೇಕು. ಕಾಂತ ನಾನಾ ಹಾನಿಗಳಿಗೆ ಸಿಕ್ಕಿ ಬಿದ್ದಿದ್ದ. ಅನುಭವದ ಅಡಿಗಲ್ಲಿಗೆ ತಲೆಕೊಟ್ಟು, ಹಿಂಸೆಯನ್ನು ಅನು ಭವಿಸಿ, ತೀರ ಹಣ್ಣಾಗಿದ್ದನೆಂದು ಹೇಳಿದರೆ ಅತಿಶಯೋಕ್ತಿಯೆನಿಸದು.

ಮಾನವ ಸಾಮಾನ್ಯವಾಗಿ, ತಾನು ಕಲೆಹಾಕಿಕೊಂಡಿರುವ ಸಂಪತ್ತಿನಿಂದಲೇ ತೃಪ್ತಿಹೊಂದಿ ಸುಮ್ಮನಿರುವುದಿಲ್ಲ. ಗಳಿಸಬೇಕು, ಕೂಡಿಹಾಕಬೇಕು, ಮತ್ತೆ ಗಳಿಸಬೇಕು ಎಂಬ ಉದ್ಯಮದಲ್ಲಿರುತ್ತಾನೆ. ಇನ್ನು ಸಾಕು! ಎಂಬ ಕಟ್ಟಕಡೆಯ ತೃಪ್ತಿಯ ಪೂರ್ಣಮಾತು ಅವನಿಂದ ಬರುವುದೇ ಇಲ್ಲ. ಇದು ಲೋಕರೂಢಿ. ಕಾಂತನೂ ಹಾಗೆಯೇ ಅತೃಪ್ತಿ ವಾತಾವರಣದಲ್ಲಿ ಸುಳಿದಾಡುತ್ತಲೇಯಿದ್ದ. ಒಂದು ಕೃತಿಯಿಂದ ಮತ್ತೊಂದು ಕೃತಿರಚನೆ ಮಾಡುವ ಯೋಜನೆ. ಒಂದು ವಿನ್ಯಾಸದಿಂದ ಮತ್ತೊಂದರ ಕಡೆಗೆ ಗಮನ, ಹೀಗಾಗಿ; ಅವನ ಸಾಹಿತ್ಯ-ವ್ಯಾಪಾರ ವಿಚಿತ್ರತರವಾಗಿತ್ತು. ಅಲ್ಲದೆ, ಜನರಿಗೆ ಊರಿಗೆ ಬೇಡವಾಗಿ ಹೊರ ದೂಡಲ್ಪಟ್ಟ ಮನುಷ್ಯ. ಜನರು ನನ್ನ ಪಾಡಿಗೆ ಬಾರದಿದ್ದರೆ ಸಾಕು. ನನ್ನ ಚಿಂತನೆ ಯಾರೂ ಮಾಡಬೇಕಾದುದಿಲ್ಲ ಎಂದು ಸಮಾಧಾನ ದಿಂದಲೇಯಿದ್ದ.

ಇಂತಹ ಬೇಡವಾದ ವ್ಯಕ್ತಿಯ ಸಹಾಯವನ್ನು ಒಬ್ಬರು ಅಪೇಕ್ಷಿಸುವ ಕಾಲ ಬಂತು. ಅಲಕಾ-ಚಂದ್ರಿಕಾ ಕಾಂತನನ್ನು ಬಲ್ಲವರಾಗಿದ್ದರು. ಪರಿಚಯ ಹೇಳಿಕೊಂಡಿರಲಿಲ್ಲ ಮತ್ತು ತಮ್ಮ ದುಃಖವನ್ನು ತೋಡಿಕೊಂಡಿರ ಲಿಲ್ಲ. ಅವನ ಕೀರ್ತಿ, ಲೇಖಣಿ, ವರ್ತನೆ ಚನ್ನಾಗಿ ತಿಳಿದಿದ್ದ ಚಂದ್ರಿಕೆ;

ತನ್ನ ತಾಪವನ್ನು ಅವನೊಂದಿಗೆ ಹೇಳಿಕೊಂಡು ಹೇಗಾದರೂ ದಾರಿಗಾಣ ಬೇಕೆಂದು ಬಯಸುತ್ತಿದ್ದಳು.

ಕಾಂತ ತನ್ನ ನಿವಾಸದಲ್ಲಿ ಕಲ್ಪನಾ ತೂಗುಮಂಚದಮೇಲೆ ಪವಡಿಸಿದ್ದ. ಸುತ್ತಲೂ ಅವನ ನಿಧಿಯಾಗಿದ್ದ ಪುಸ್ತಕಗಳು ಬಿದ್ದಿದ್ದವು. ತೂರಾಡುತ್ತಿದ್ದ ಚೂರು ಕಾಗದಗಳು ಬೇರೆ. ಕಾಂತನ ನಿವಾಸವಿದ್ದುದು ದಿವಿಜಪುರದ ಮೂಲೆಯಲ್ಲಿ. ಈ ನಿವಾಸವನ್ನು ಪ್ರವೇಶಿಸಿ, ಕಾಂತನೊಡನೆ ಮಾತನಾಡಲು ಅಪೇಕ್ಷಿಸಿ ಬಂದವರೇ ಇರಲಿಲ್ಲ. ನಾನು, ತೊರೆದು ಬಿಟ್ಟಂತಹ ಶುನಕನಹಾಗೆಯೆಂದು ಕಾಂತ ದೂರವಿರುತ್ತಿದ್ದ. ಅಪವಾದ ವರ್ಗದಲ್ಲಿ ಸೇರಲ್ಪಟ್ಟವನನ್ನು, ಜಾತಿಹೀನನನ್ನು ಯಾರು ಮಾತನಾಡಿಸುತ್ತಾರೆ? ಅವನೊಡನೆ ಸಂಪರ್ಕವನ್ನೇಕೆ ಇತರರು ಇಟ್ಟುಕೊಳ್ಳುತ್ತಾರೆ?

ನನಗೆ ಊರಿನವರಿಂದ ಹಾನಿಯಿಲ್ಲ, ಲಾಭವೂಯಿಲ್ಲ. ಅಶನಕ್ಕಾಗಿ ನಾನು ಬೇಡಬೇಕಾಗಿಲ್ಲ, ಬರೆಯುಬೇಕೆಂದು ಹಠತೊಟ್ಟು ಧ್ಯೇಯವನ್ನೇ ಹಿಡಿದು ಅನುಸರಿಸುತ್ತಿರುವವನಿಗೆ; ಯಾರಿಂದ ಏನಾದೀತು? ಹೆದರಿದರೇನು ಬಂತು? ಬರೆಯುವುದನ್ನು, ಬಂಡಾಯವೆಬ್ಬಿಸುವುದನ್ನು ನಿಲ್ಲಿಸಲಾರೆ. ಮನ್ನಣೆ ದೊರೆಯದಿದ್ದರೆ ಬೇಡ. ನನಗೆ ಸ್ನೇಹಿತರಿಲ್ಲ, ಗಳಿಸುವ ಯೋಚನೆಯೂಯಿಲ್ಲ. ಬರಹಗಾರ ದೊಡ್ಡ ತ್ಯಾಗಮಾಡಬೇಕು. ಲೇಖಣಿ ಕೈವಶಮಾಡಿಕೊಳ್ಳಲು ಮಹಾತಪಸ್ಸು ಮಾಡಬೇಕು. ಮಹಾತಪಸ್ಸು, ಮಹಾತ್ಯಾಗ ಮಾಡಿದಮೇಲೆಯೇ ಸಾಕ್ಷಾತ್ಕಾರ ಕಾಣುವುದು. ಊರಿನಲ್ಲಿ ಹಬ್ಬಿರುವ ಕಾಳ್ಗಿಚ್ಚು, ಕಳಂಕವಾರ್ತೆ ನೆನೆಯದೆಯೇ; ತೀರ ಕಿವುಡನಂತೆ ಇದ್ದುಬಿಡಬೇಕೆಂದು ದೃಢಮನಸ್ಸು ಅವನು ಮಾಡಿದ್ದ.

೫

ಒಂದು ಮಧ್ಯಾಹ್ನ ಕಾಂತ, ಪಲ್ಲಂಕದ ಮೇಲೆ ಮಲಗಿದ್ದ. ಬಿಸಲಿನ ಜಳ ಹೆಚ್ಚಿತ್ತು. ಭಾವಸಮಾಧಿ, ಕಲ್ಪನಾಸಮಾಧಿ, ಭಾವ ಪ್ರಭಾತದ ಸುಸಮಯ ಆಗವನಿಗೆ. ಪಲ್ಲಂಕ, ಲೇಖಕನಿಗೆ ಅಚ್ಚುಮೆಚ್ಚಿನ ಸೋಪಾನ. ಲೇಖಕನಿಗೆ, ತಾನು ಬರೆಯುವ ಕೋಣೆ ವಿಶ್ರಾಲಯ.

ಲೇಖಕ ಕಾಂತ, ತನ್ನ ಕೋಣೆಯಲ್ಲಿ ಭಾವಮನೋರಂಗದಲ್ಲಿ ಇಳಿದು, ಯಾವ ಕುಡಿಯನ್ನೋ ಯೋಚಿಸುತ್ತಾ ಮಲಗಿದ್ದ.

ಅಂದು ವೃದ್ಧನಾರಿ ಚಂದ್ರಿಕೆ, ಅಲಕೆಯೊಂದಿಗೆ ಶಾಂತಿಕುಟೀರ ವೆನಿಸಿದ ಕಾಂತನ ನಿವಾಸದ ಪಾವಟಿಗೆಯನ್ನು ಅಂಜಿಕೆಯಿಂದಲೇ ಏರಿ ಬಂದಳು. ಗೃಹವನ್ನೇಕೆ ಪ್ರವೇಶಿಸಿ ಬಂದಳು? ತನ್ನ ಸಮಸ್ಯೆಗೆ, ಇಡೀ ಜೀವನ ಸಮಸ್ಯೆಗೆ, ಸಮರ್ಥ ಕಾಂತನಿಂದಾದರೂ ಸಹಾಯ ದೊರೆತೀತು; ಎಂದವಳು ಬಂದಿದ್ದಳು. ಏರಿ ಬರುವಾಗಲೇ ನಾನಾ ತರದ ಭಯವು ಅವಳನ್ನು ಪೀಡಿಸಿತು. ಗಣ್ಯಪುರುಷನನ್ನು ಸಂದರ್ಶಿಸಿ, ತನ್ನ ಸಮಸ್ಯೆಯ ಪ್ರಸ್ತಾವನೆ ಮೊದಲಾಗಿ ಮಾಡಲು ವೃದ್ಧೆಗೆ ಧೈರ್ಯವಿರಲಿಲ್ಲ. ಪುರುಷ ಪ್ರಭಾವಿಯೊಂದಿಗೆ, ಸರಳವಿರಳವಾಗಿ ಮಹತ್ವವಿಷಯವನ್ನು, ಜೀವನದ ಗೂಢವಿಚಾರವನ್ನು ಎತ್ತಿ ಮಾತನಾಡುವುದು ಅಷ್ಟು ಸುಲಭವಾದ ಕೆಲಸವೆ?

ಪತಿಯನ್ನು ಕಳೆದುಕೊಂಡು, ತನ್ನ ಜೀವದ ಉಸಿರಾದ ಮಗಳನ್ನು ಉಳಿಸಿಕೊಂಡು, ಗಂಡುದಿಕ್ಕಿಲ್ಲದ ಸಂಸಾರನೊಗದ ಭಾರವನ್ನು ವಹಿಸಿ ಮೆತ್ತಗಾಗಿದ್ದ ಚಂದ್ರಿಕೆ; ಕಾಂತನನ್ನು ಕಾಣಲು ಬಂದಿದ್ದಳು. ದಾರಿದ್ರ್ಯ ದುಃಖ ಚಂದ್ರಿಕೆಯನ್ನು ಹೆಚ್ಚು ಪೀಡಿಸಿರಲಿಲ್ಲ. ಕಾಂತನ ಮೇಲೆ, ಸಮಾಜದ ಪ್ರತಿಷ್ಠಿತ ಜನರು ರೋಷದಿಂದ ಉಕ್ಕೇರಿ ಸಲ್ಲದ ಆರೋಪಣೆ ಮಾಡಿ ಕಪ್ಪುಕಳಂಕ ಹಚ್ಚಿದಂತೆ; ಚಂದ್ರಿಕೆಗೂ ಅವಳ ಮಗಳು ಅಲಕೆಗೂ ಹಚ್ಚಿದ್ದರು. ಜಾತಿಬಾಹಿರರು, ನೀತಿಬಾಹಿರರು, ಸಮಾಜದಿಂದ ದೂರ ವಿರುವವರು, ತಮ್ಮ ಬಳಗದವರೊಂದಿಗೆ ಹೀಗೆ ಹೊರದೂಡಲ್ಪಟ್ಟ ಜನ ರೊಂದಿಗೆ ತಾನೇ ಕೂಡಿಕೊಳ್ಳಬೇಕು? ಚಂದ್ರಿಕೆ, ಮಗಳು ಅಲಕಾ ಪುರೋಭಿವೃದ್ಧಿ ನೆನೆದು, ಏನಾದರೂ ಕಾಂತನ ಮುಖದಿಂದ ಸೂಕ್ತಸಲಹೆ ಬಂದೀತೆಂದು ಹೊಸಲು ಮೆಟ್ಟಿಬಂದಳು.

ಕವಿ, ಪಲ್ಲಂಕದ ಮೇಲೆ ಮಲಗಿ ಭಾವಣಿಯನ್ನು ನೋಡುತ್ತಾ ಯಾರಿಗೂ ಬೇಡವಾದ ತನ್ನ ಗೃಹದಲ್ಲಿಯೇ ಇದ್ದ. ಆಗ ಚಂದ್ರಿಕೆ ಅಲಕೆ ಯೊಂದಿಗೆ ಬಂದಳು. ಅಪರಿಚಿತ ಮಹಿಳೆಯರನ್ನು ನೋಡಿ ಕಾಂತ, ಆಶ್ಚರ್ಯಪಟ್ಟ. ಇಡೀ ದಿವಿಜಪುರವಾಸಿಗಳ ಸಹಕಾರ ಸೌಹಾರ್ದವೇ ತನಗಿಲ್ಲದಿರುವಾಗ, ಈ ಮಹಿಳೆಯರಿಬ್ಬರೇಕೆ ಇಲ್ಲಿ ಬರುವ ಸಾಹಸಮಾಡಿ

ದರು? ನನ್ನ ಸಚ್ಚರಿತೆಯನ್ನು ತಿಳಿದು, ಗೃಹಹೊಕ್ಕು ಬರುವಂತಹ ಎದೆ ಯಾರಿಗಿರುವುದು?

ಗೃಹದಸುತ್ತ ನೀಲಪಚ್ಚೆ. ಬಾಂದಳದ ಹರವು ತುಂಬಾ ಜ್ವಲಿಸುವ ಸೂರ್ಯಕಿರಣವಿತ್ತು. ಮೌನದ ಕಡಲಿನಲ್ಲಿ ಕಾಂತ ವಿರಮಿಸುತ್ತಾ ಬಿದ್ದುಕೊಂಡಿದ್ದಾಗಲೇ ಇದೆಲ್ಲಾ ನಡೆದವು. ಕೋಮಲ ಕಂಠಧ್ವನಿಯು ಕೇಳಿಬಂದಾಗ, ಅವನು ಎಚ್ಚೆತ್ತ. ಯಾತ್ರಿಕನು ಕ್ಷೇತ್ರವನ್ನು ಕಂಡಾಗ ಆನಂದದಿಂದ ಹಿಗ್ಗಿಬಿಡುವಂತೆ, ತನ್ನನ್ನು ನೋಡಲುಬಂದ ಬಂಧುಗಳನ್ನು ನೋಡಿ ಕಾಂತ ಹಿಗ್ಗಿದ. ಅವರನ್ನು ಗೃಹದೊಳಗೆ ಬರುವಂತೆ ಸೂಚಿಸಿದ. ಬಂದ ಅಪರಿಚಿತ ವ್ಯಕ್ತಿಗಳೊಡನೆ ಧಾರಾಳವಾಗಿ ಮಾತನಾಡಿ, ಅವರಿಂದಲೇ ಬಂದ ಉದ್ದೇಶ ತಿಳಿದುಕೊಳ್ಳಲು ಆತುರದಿಂದಿದ್ದ.

ಚಂದ್ರಿಕೆ, ಮೊದಲಾಗಿ ಜಗದ್ವಂದ್ಯ ವ್ಯಕ್ತಿಗಳನ್ನು ಹೊಗಳುವಂತೆ ಕಾಂತನನ್ನು ಬಾಯಿತುಂಬಾ ಹೊಗಳಿದಳು. ಅವನ ಬರಹದ ಮಾತೆತ್ತಿ, ಅವನು ಲೋಕಮಾನ್ಯನೆಂದು ಮಧುರಕಂಠದಲ್ಲಿ ಎಷ್ಟು ಮಾತನಾಡಬಹುದೋ ಅಷ್ಟನ್ನು ಹಾಡಿ ಹರಿಸಿಬಿಟ್ಟಳು. ಈ ಅಪರಿಚಿತ ವ್ಯಕ್ತಿ ಇಷ್ಟೇಕೆ ಪ್ರಶಂಸೆಮಾಡುತ್ತಿದ್ದಾಳೆ? ಹೊಗಳಿಕೆಯಿಂದಾಗುವುದೇನು, ನನ್ನನ್ನು ತೆಗಳುವವರೇ ಹೆಚ್ಚಾಗಿರುವವರಲ್ಲಾ! ಎಂದು ಕಾಂತ, ಮಾತನಾಡದೆ ಸಹನೆಯಿಂದ ಕೇಳುತ್ತಿದ್ದ. ವೃದ್ಧೆ, ಮಾತನಾಡುವುದನ್ನೆಲ್ಲಾ ಮುಗಿಸಿ; ತನ್ನ ಸ್ವಂತ ಪ್ರಕರಣ ವಿಚಾರವನ್ನು ವಿವರಿಸಿಕೊಂಡಳು. ಹೊಸಬನೊಡನೆ ಇನ್ನೂ ಹೆಚ್ಚಿಗೆ ಪರಿಚಯವಾಗದ ಅಪರಿಚಿತಮಾನ್ಯನೊಡನೆ ಅವಳು ಎಷ್ಟು ಹೇಳಿಕೊಂಡಾಳು? ಲೇಖಕನಿಗೆ ಶ್ರೇಯಸ್ಸಿನಲ್ಲಿ ಪಾಲುಗಾರಿಕೆ ಹೆಚ್ಚು, ಎಂದು ಅವಳು ಕಾಂತನ ಬರಹವನ್ನು ಮೆಚ್ಚುತ್ತಾ ಅವನಿಂದ ಹೊರಬಿದ್ದಿದ್ದ ಕೃತಿಕಿರಣಗಳನ್ನು ಎಣಿಸುತ್ತಾ "ಜೀವನ ಕೊನೆಯದಿನದಲ್ಲಿ, ಸಾವಿಗೆ ಮುಂಚೆಯಾದರೂ ನನ್ನ ಕನಸ್ಸು ಬಹುದಿನದ ಕನಸ್ಸು ಕೊನೆಮುಟ್ಟುವುದೇ" ಎಂದು ತನ್ನಾಸೆಯನ್ನು ನಿಸ್ಸಂಕೋಚದಿಂದ ಕಾಂತನಲ್ಲಿ ಹೇಳಿಕೊಂಡಳು.

"ನೀವು ಶ್ರೇಯಸ್ಸು, ಪಾಲುಗಾರಿಕೆ ಎಂದು ಬಹಳ ಮಾತನಾಡಿದಿರಿ; ತಮ್ಮ ಪಾಲಿಗೆ ಹೆಚ್ಚು ಶ್ರೇಯಸ್ಸು ಲಭಿಸಲಿಯೆನ್ನುವರು ಹೆಚ್ಚು

ಸಾರಿ ಪೆಟ್ಟುತಿನ್ನಬೇಕು" ಎಂದ.

"ನೀವು ಹೆಚ್ಚು ಪೆಟ್ಟು ತಿಂದು ಕಷ್ಟ ಅನುಭವಿಸಿರಬೇಕಲ್ಲವೆ?"

"ಕೊಡಲಿ ಪೆಟ್ಟೇನು ತಾಯಿ! ಕರಾಳ ಸಮಾಜ ಶಾಸನವೇ ನನ್ನನ್ನು, ನಿಮ್ಮನ್ನು ತುಳಿದುಬಿಟ್ಟದೆ. ನಾವು ಮೇಲೇಳದ ಹಾಗೆ ತುಳಿದು ಬಿಟ್ಟದೆ. ನಮ್ಮನ್ನು ಉದ್ಧರಿಸುವ ಜನರಾರೂ ಇಲ್ಲ. ಅಂತಹ ಜನರೂ ಹುಟ್ಟಿಲ್ಲ"

"ಅಂತಹ ಜನರಿಲ್ಲ. ನಿಮ್ಮಂತಹ ಹಿತಚಿಂತಕರಿಂದಲಾದರೂ ನನಗೆ ದಾರಿಸಿಕ್ಕೀತೆಂದು ನಂಬಿ ಬಂದಿರುವೆ" ಎಂದು ಚಂದ್ರಿಕೆ, ಪಾದಕ್ಕೇ ನಿಂತುಬಿಟ್ಟಳು. ದೂರದ ಮೂಲೆಯೊಂದರಲ್ಲಿ ಅಲಕಾ ತಲೆ ತಗ್ಗಿಸಿ ಮೂಕಳಂತೆ ಇವರಾಡುತ್ತಿದ್ದ ಮಾತುಗಳನ್ನು ಕೇಳುತ್ತಾ ಕುಳಿತು ಬಿಟ್ಟಿದ್ದಳು. ಕಾಂತ ನಿಧಾನದಿಂದಲೇ ಶಾಂತಸ್ವರದಿಂದಲೇ ಪ್ರತಿಮಾತಿಗೂ ನಗುತ್ತಾ ಸರಳವಾಗಿ ಉತ್ತರಕೊಡುತ್ತಿದ್ದ. ಚಂದ್ರಿಕೆ ತನ್ನ ಗೃಹಕ್ಕೆ ಏಕೆ ಬಂದಳು? ಅವಳ ನೋವೇನು ಎಂಬುದು ಕಾಂತನಿಗೆ ಅರ್ಥವಾಯಿತು. ವಾದದಲ್ಲಿ ತಾನು ಯಾರಿಗೂ ಕಡಿಮೆಯುವನಲ್ಲವೆಂಬ ಆತ್ಮನಂಬಿಕೆ ಯಿಂದಲೇ ಅಳುಕದೆ ಅವನು ಮಾತನಾಡುತ್ತಾ ಕುಳಿತ.

"ತಾಯಿ ಉದ್ಧರಿಸಲು ಜನರು ಮುಂದೆಬಾರರು. ನಂದಾದೀಪದ ತುಂಬಾ ಎಣ್ಣೆ ಇರುತ್ತದೆ. ಎಣ್ಣೆ ಹೀರಿಕೊಂಡು ಚನ್ನಾಗಿ ತೋಯ್ದ ಬತ್ತಿ ಬೆಳಕುಕೊಡುತ್ತಾ ಇರುತ್ತದೆ. ಈ ಊರಿನಲ್ಲಿ ನೊಂದವರ ಜೀವವನ್ನು ಚನ್ನಾಗಿ ಹಿಂಡಿದ ಪ್ರತಿಷ್ಠಿತ ಜನರಿದ್ದಾರೆ. ಅವರ ದರ್ಪವೆ ಹೆಚ್ಚು. ಅವರ ಮೇಲಗೈಗೆ ಸಿಕ್ಕಿ, ಬಲಿಯಾಗುತ್ತಿದ್ದಾರೆ ಜನರು. ಅವರದೇ ಕೈವಾಡ. ದೀಪ ಬೆಳಕುಕೊಡುತ್ತಾ ಉರಿಯುತ್ತಿರುವುದಲ್ಲಾ ಹಾಗೆಯೇ ಇವರ ಪ್ರತಿಕ್ರಿಯೆಯೇ ಹೆಚ್ಚಾಗಿರುವಾಗ ಇವರಲ್ಲಿ ಉದ್ಧರಿಸುವ ಜನರನ್ನು ಬಯಸುವುದು ಹೇಗೆ?" ಎಂದ ಕಾಂತ.

"ನಿಮಗೆ, ನಿಮ್ಮಂತಹ ಪ್ರಜ್ಞಾಶಾಲಿಗಳಿಗೇ ಉದ್ಧರಿಸುವ ಜನರು ಕಾಣದಿದ್ದರೆ, ನಮ್ಮಂತಹ ಅಬಲೆಯರಿಗೆ, ನಿರಾಶ್ರಿತರಿಗೆ ಅವರು ಕಾಣಿಸಿ ಕೊಳ್ಳುವರೆ? ನಮಗೆ ಸಮಾಜದಲ್ಲಿ ಬಲ್ಲಿದವರ ಟೀಕೆಯನ್ನು ಎದುರಿಸಲು ಶಕ್ತಿಯಿಲ್ಲ, ಜೀವಿಸಲೂ ಸಾಧ್ಯವಿಲ್ಲ; ಹೀಗೆಂದಮೇಲೆ ನಮ್ಮ ಬಾಳು

ನಡೆಯುವುದು ಹೇಗೆ?" ಎಂದು ಕರುಣಸ್ವರದಿಂದ ಚಂದ್ರಿಕೆ ಕೇಳಿ ಕೊಂಡಳು.

"ನಿಜ! ಅಂತಹ ದೀನದುಃಖಿಗಳಿಗೆ ಆಶ್ರಯಕೊಡುವವರು ಯಾರೂ ಇಲ್ಲ. ದರ್ಪಿತಜನರು ತಮ್ಮ ಸ್ವಾರ್ಥದಾಸೆ ಪೂರೈಸಿಗೊಳ್ಳುವ ಮುಂಚೆಯೇ ಇತರರಿಗೆ ಸಹಾಯವೆಲ್ಲಿ ಮಾಡಿಯಾರು?"

"ಹೀಗೆಂದು ನೀವು ಉದ್ಗಾರತೆಗೆದು ನಮ್ಮನ್ನು ಹೊರದೂಡುವು ದಾದರೆ ನಾವೆಲ್ಲಿ ಹೋಗುವುದು, ಆಶ್ರಯಪಡೆಯುವುದು? ನಾಲ್ಕೂ ದಿಕ್ಕು ಗಳಲ್ಲಿ ನಮಗೆ ಅವಾಚ್ಯ ನಿಂದನೆಗಳು ಇದ್ದೇ ಇರುವುವು. ಸುಖದುಃಖ ಮಾತನಾಡಿಕೊಳ್ಳಲು ನಮಗೆ ಜಾಗವೇ ಇಲ್ಲ. ನೀವು ಕರುಣಾಳುಗಳು, ಸತ್ಯಕ್ಕಾಗಿ ನ್ಯಾಯಕ್ಕಾಗಿ ಹೋರಾಡುತ್ತಿರುವರೆಂದು ತಿಳಿದೇ ನಾವಿಬ್ಬರೂ ನಿಮ್ಮಲ್ಲಿ ಸಲಹೆಕೇಳಲು ಬಂದೆವು. ನೀವು ಎಲ್ಲರಹಾಗೆ ಬಾಗಿಲಕಡೆ ಕೈ ತೋರಿದರೆ, ನಮಗೆ ಗತಿಯೇ ಇರುವುದಿಲ್ಲ, ಸಂಕಟದಿಂದ ಪಾರಾಗಲು ನಮಗೆ ಶಕ್ತಿಯೂ ಇಲ್ಲ"

"ನನ್ನಿಂದೇನು ಸಹಾಯವಾದೀತು! ಇತರರಿಗೆ ಸಹಾಯಮಾಡು ವಷ್ಟು ನನಗಧಿಕಾರವಿದೆಯೆ ಅಥವಾ ಶಕ್ತಿಯಿದೆಯೆ?"

"ಲೇಖನದಿಂದಲೂ ಕೃತಿಯಿಂದಲೂ ಜನರನ್ನು ಕೆರಳಿಸುತ್ತ ಬುದ್ಧಿ ಹೇಳುತ್ತ ನೀವಿಲ್ಲವೆ? ಅವರು ನಿಮ್ಮ ಮಾತಿಗೆ ಕಿವಿಗೊಡಲೇಬೇಕು. ಚೇತನದ ಮಿರುಗು ಹರಿಸುತ್ತ ಹೃದಯದ ಹೊಸಬಾಗಿಲು ತೆಗೆಯುವಂತೆ ಮಾಡುವಶಕ್ತಿ ನಿಮಗಿದೆ. ನಿಮ್ಮ ಆಶ್ರಯಪಡೆದು, ದುಃಖಮರೆತು, ಜೋಲುಬಿದ್ದಿರುವ ಮೊಗದಲ್ಲಿ ಒಮ್ಮೆಯಾದರೂ ಒಲವು ಕಾಣಲಿಯೆಂದು ಆಶಿಸುತ್ತಿದ್ದೇನೆ. ನಗುಹರಿಸಿ, ಹೃದಯ ವಿಶ್ವಾಸಕಂಡು, ಜೀವಮಾನದಲ್ಲಿ ಒಂದು ದಿನ ಮಿಗಿಲಾದ ಒಲವುನಲವುಗಳ ಸಮತೂಕ ಕಂಡು ಕಣ್ಣು ಮುಚ್ಚಬೇಕೆಂದಿರುವೆ" ಎಂದು ಚಂದ್ರಿಕೆ ಬಿಕ್ಕಿಬಿಕ್ಕಿ ಮೊಗಮುಚ್ಚಿಕೊಂಡು ಅತ್ತುಬಿಟ್ಟಳು.

ದೂರದಲ್ಲಿ ಕುಳಿತ್ತಿದ್ದ ಅಲಕಾ, ಕಂಬನಿ ತುಂಬಿಕೊಂಡು ತಾಯಿಕಡೆ ನೋಡುತ್ತಿದ್ದಳು. ವಿಶ್ವಪ್ರೇಮಿಯಾದ ಕಾಂತ, ತಾಯಿಯ ನುಡಿಯನ್ನು, ಭಾವವನ್ನು, ಅಳಲನ್ನು ಅರಿತುಗೊಂಡು ಏನಾದರೂ ದಾರಿ ತೋರಿಸಿ

ಯಾನು ಎಂಬಾಸೆಯಿಂದಲೇ ಸಮಾಧಾನದಿಂದಿದ್ದಳು.

ಕಾಂತ ಏನು ಮಾಡಿಯಾನು? ವ್ಯಾಕುಲತೆಯಿಂದಲೇ ಎಲ್ಲಾ ಸಮಾಚಾರವನ್ನು ಚಂದ್ರಿಕೆಯಿಂದ ತಿಳಿದುಕೊಂಡವನು, ಇವರೆದೆಗಳು ಚಡಪಡಿಸುತ್ತಿರುವುದನ್ನು ಕೇಳಿ ಇವರಿಗೆ ಹೇಗೆ ಸಹಾಯಮಾಡುವುದೆಂದು ಯೋಚಿಸಿದ. ಭರವಸೆಯೀಯುವುದು ಹೇಗೆ? ಭಿಕ್ಷುಕರಿಗೆ, ಬೇಡುವ ದೀನರಿಗೆ, ಕಾಸೆಸೆದು ಪೀಡೆ ತೊಲಗುಹೋಗು ಎಂದು ಅಟ್ಟುವಂತೆ ಇವರನ್ನು ಅಟ್ಟಲಾಗುವುದಿಲ್ಲ. ನನ್ನ ನಾಯಕತ್ವದಲ್ಲಿ ವೃದ್ಧಮಹಿಳೆಯ ಶಾಂತಿಸುಧಾರಣೆ ಹೇಗಾದೀತು? ನನ್ನ ನಗುಮೊಗ, ಶಾಂತಪ್ರಿಯತೆ, ಸ್ನೇಹದ ಹೆಗ್ಗುರುತೆಂದು ಈ ಜನರು ಗಂಟುಬಿದ್ದಿದ್ದಾರೆ. ಈಗೇನು ಮಾಡುವುದು? ಸಾಧ್ಯವಿಲ್ಲವಲ್ಲಾ ಎಂದು ಅವನು ಮೌನದಿಂದಲೇ ಕೂತಿದ್ದ.

ಪ್ರೇಮ, ಪ್ರೀತಿ, ಸತ್ಯಸೌಂದರ್ಯ, ಉದಾತ್ತಭಾವನೆಗಳನ್ನು ಕುರಿತು ಮುಖ್ಯವಾಗಿ ಹೆಣ್ಣಿನ ದುಃಖ, ದುಃಸ್ಥಿತಿ, ಕಷ್ಟನಿಷ್ಠೂರಗಳನ್ನು ಚಿತ್ರಿಸುತ್ತಿದ್ದ ಲೇಖಕ, ಎರಡು ಹೆಣ್ಣು ಜೀವಿಗಳು ತಮ್ಮ ಅಳಲನ್ನು ತನ್ನ ಮುಂದೆ ತೋಡಿಕೊಂಡು ದಾರಿತೋರಿಸೆಂದು ಬೇಡಿಕೊಂಡಾಗ ತನ್ನ ಕರ್ತವ್ಯವೇನೆಂದು ಅರಿತುಕೊಂಡ. ನನ್ನಂತೆ ಇವರೂ ಸಮಾಜಬಾಹಿರರು. ಇವರ ಸಚ್ಚರಿತೆಯನ್ನು ಬಲಿಷ್ಠರು ಅಂದಗೆಡಿಸಿದ್ದಾರೆ. ಕಲಂಕದ ಕಾಡಿಗೆ ಹಚ್ಚಿದ್ದಾರೆ. ಪವಿತ್ರ ವ್ಯಕ್ತಿಚಿತ್ರ ರಚಿಸಿದ ನಾನು, ಇವರಿಗೆ ಸಹಾಯವೊಂದನ್ನು ಸೂಚಿಸದೆ ಕಳುಹಿಸುವುದು ಸರಿಯಲ್ಲ, ನ್ಯಾಯವೂ ಅಲ್ಲ. ಕವಿ, ವಿವಿಧ ಕುಸುಮಗಳ ತಂಪು, ದುಂಬಿಗಳ ಝೇಂಕಾರ, ಹಕ್ಕಿಗಳ ಸವಿಗಾನ, ಕಾರಂಜಿಗಳಲ್ಲಿ ವಿಹಾರಿಸುವ ಹಂಸಗಳ ನಲಿದಾಟ, ತಂಗಾಳಿ, ಬೆಳದಿಂಗಳು, ಮುಂತಾದ ಚಿತ್ತಾಹ್ಲಾದಕವಾಗಿರುವುದನ್ನು ಮಾತ್ರ ವರ್ಣಿಸಿ ತೃಪ್ತನಾಗುತ್ತಾನೆ. ಕವಿಯಾದವನು ತನ್ನದೇ ಆದ ಸ್ವಚ್ಛ ಸ್ವತಂತ್ರ ಸ್ವಕೀಯರಾಜ್ಯದ ಎಲ್ಲೆಯನ್ನು ಕಟ್ಟಿಕೊಂಡು, ಜೀವನಕ್ಕೆ ಸಂಬಂಧಿಸಿದ ವಿಷಯಗಳನ್ನು ತನ್ನಲ್ಲಿಯೇ ಚರ್ಚಿಸಿ ಮುಗಿಸಿದರೇನಾಯಿತು? ಪಳಗಿದ ಕೈಯೆನಿಸಿ, ಲೇಖಣಿ ಹಿಡಿದಂತವನು; ಸಹೃದಯನೆಂದು, ನಿಧಿಯೆಂದು, ಸಿದ್ಧಿಗಳಿಸಿಕೊಂಡವನೆಂದು ಹೆಮ್ಮೆಯಿಂದಿದ್ದರಾಗದು. ಮುಖ್ಯವಾಗಿ ಸಮಾಜದಲ್ಲಿ ಕೆಲವು ದರ್ಪಿತಜನರು, ದೀನರಿಗೆ ಅನೇಕ ಸವಾಲು ಹಾಕಿ

ಹಿಂಸೆಪಡಿಸುತ್ತಿದ್ದಾರೆ. ಅಂತಹ ಸವಾಲುಗಳಿಗೆ ಉತ್ತರಕೊಡಬೇಕು. ಅಕ್ಕಸಾಲಿಗ ಸ್ವರ್ಣವನ್ನು ಒರೆಹಿಡಿದು ಪರೀಕ್ಷಿಸುವಂತೆ ನಾನೂ ನನ್ನ ಆದರ್ಶ ಜೀವನವನ್ನು ತಿದ್ದಿರೂಪಿಸಿಕೊಳ್ಳಬೇಕು. ಹಾಗೆ ಮಾಡದಿದ್ದಲ್ಲಿ; ವಾಙ್ಮಯದೇವಿಯ ತಪೋಭೂಮಿಯಲ್ಲಿ ನಿಂತು ತಪಸ್ಸುಮಾಡಿ, ಜೀವನದ ಮೇಲ್ಮೆಟ್ಟ ಹತ್ತಿ ನಿಂತು ಪ್ರಯೋಜನವೇನು? ನನ್ನ ಸಮಸ್ಯೆಯೇ ಇವರ ಸಮಸ್ಯೆಯಾಗಿದೆ ಎಂದುಕೊಂಡ ಕಾಂತ. ಅಬಲೆಯರಿಬ್ಬರ ಶೋಚನೀಯ ಸ್ಥಿತಿಯನ್ನು ಕಂಡು ಮರುಗಿ "ನಮಗೂ ನಿಮಗೂ ಆಶ್ರಯಕೊಟ್ಟು ಅನುಕೂಲಮಾಡಿಕೊಡುವಂತಹ ಜನರಿಲ್ಲ. ಅಂತಹ ದಾತಾರರೂ ಹುಟ್ಟಿಲ್ಲ. ನಮ್ಮ ಮೇಲೆ ಬೇಕಾದಷ್ಟು ಟೀಕೆಟಿಪ್ಪಣಿಗಳಿವೆ. ನೀವು ನನ್ನ ಗೃಹಕ್ಕೆ ಬಂದು ಆಶ್ರಯ ಕೇಳುತ್ತಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಸಮಾಜ ಬಾಹಿರರಿಗೆ ಬೇರೆ ನೆಲೆಯಿಲ್ಲ. ನೀವು ಇಲ್ಲಿಯೇ, ಈ ಗೃಹದಲ್ಲಿಯೇ ಏಕೆ ನಿಲ್ಲಬಾರದು? ಸ್ವಲ್ಪಕಾಲದವರೆಗೆ ನಿಲ್ಲಿ, ಏನಾದರೂ ವ್ಯವಸ್ಥೆಮಾಡುವಾ" ಎಂದು ಕಾಂತ ಅವರನ್ನು ನಿಲ್ಲಿಸಿಕೊಂಡ. ವಿಧಿಯಿಲ್ಲದೆ ಮರುಮಾತ ನಾಡದೆ ಚಂದ್ರಿಕೆ, ಅಲಕಾ ನಿಲ್ಲಲು ಒಪ್ಪಿದರು. ದೊಡ್ಡಸಮಸ್ಯೆಗೆ ಒಮ್ಮೆಲೇ ದಾರಿತೋರುವುದು ಅವನಿಂದ ಹೇಗಾದೀತು ಎಂದವರಿಬ್ಬರೂ ಮೌನ ದಿಂದಿದ್ದರು.

ಅನಾಥರಿಗೆ, ಅಬಲೆಯರಿಗೆ, ದೀನರಿಗೆ ಆಶ್ರಯ ನೀಡಬೇಕು ಸರಿಯೆ. ಇವರಿಬ್ಬರೂ ನನಗೆಲ್ಲಿಯ ಬಂಧುಗಳು? ಎಂದು ಕಾಂತ ಯೋಚಿಸಿದ. ನಾನಿರುವಮನೆ ಹಾಳುಮನೆ. ಹಾಳುಮನೆಯಲ್ಲಿ ಹೊಲೆಯನಾಗಿ ನಾನಿದ್ದೇನೆ. ಇತರರು, ಅಶುಚಿಮನುಷ್ಯನೆಂದು ಕೈತೋರುತ್ತಿದ್ದಾರೆ. ನೆಲೆಯಿಲ್ಲದ ಸೌಹಾರ್ದವಿಲ್ಲದ ಠಾವಿನಲ್ಲಿ ನಾನಿರುವುದೇ, ನಿಶ್ಚಯವಿಲ್ಲ; ಈ ಮುಳ್ಳುಗಿಡದ ಪೊಳ್ಳುಪೊದೆಯಲ್ಲಿರಲು ಆಶಿಸಿ ಇವರು ಬಂದಿರುವರಲ್ಲಾ ಎಂದವನು ಗಾಢವಾಗಿ ಚರ್ಚೆ ನಡೆಸಿದ.

ನನಗೆ ಎಲ್ಲಿಯೂ ಮನ್ನಣೆಯಿಲ್ಲ, ಉತ್ತಮಾರ್ಯರ ಸ್ನೇಹವಿಲ್ಲ; ಇಲ್ಲದ ರಾಜ್ಯದ ಭಿಕಾರಿಪ್ರಜೆಯಾಗಿರುವ ನಾನು, ಅಬಲೆಯರಿಗೆ ಸಹಾಯ ಮಾಡುವೆನೆಂದು ವಾಗ್ದಾನ ಮಾಡಿರುವೆ. ನನ್ನ ಕಾಲಮೇಲೆ ನಾನು ನಿಲ್ಲಲು ಸಾಧ್ಯವಿಲ್ಲದಿರುವಾಗ ಇತರರ ಹೊರೆಯನ್ನೇಕೆ ಹಾಕಿಕೊಂಡೆ

ಎಂದವನಿಗೆನಿಸಿತು. ಹೌದು! ಬಂಡಿಗಟ್ಟಲೆ ಅಭಾಗಿನಿಯರ ಕರುಣಕಥೆಯನ್ನು, ಅನರ್ಥಪರಂಪರೆಯನ್ನು, ಕಳಕಳಿಸುವಂತಹ ಚಿತ್ರವನ್ನು ನೀನು ಬರೆದಿಲ್ಲವೇನು? ನಿನ್ನನ್ನೂ ನಿನ್ನ ಆಶ್ರಯವನ್ನೂ ನಂಬಿ ಬಂದಂತಹ ಜನರಿಗೆ ಎರಡು ಬಗೆಯುವೆಯಾ? ನಿನಗೂ, ಸಮಾಜದಲ್ಲಿ ಸಂಕುಚಿತ ಮನೋಭಾವದ ಕೋಟೆಯನ್ನು ಕಟ್ಟಿಕೊಂಡಿರುವವರಿಗೂ ಏನು ವ್ಯತ್ಯಾಸ ಎಂದವನ ಒಳಮನಸ್ಸು ಎಚ್ಚರಿಸಿತು.

ನಾನು ಸುಖಶಾಂತಿ ನಿಕೇತನದಲ್ಲಿ ಆನಂದಜ್ಞಾನ ಪಡೆದಿರುವುದು ನಿಜ. ನೂರಾರು ಸಮಸ್ಯೆಗಳನ್ನು ಜಟಿಲ ವಿಚಾರವನ್ನು ಸುಲಭವಾಗಿ ಸರಳವಾಗಿ ಗ್ರಂಥಪುಟಗಳಲ್ಲಿ ಬಿಡಿಸಿ ಚತುರತೆಯನ್ನು ತೋರಿರುವುದು ನಿಜ. ಅಬಲೆಯರ ಆರ್ತನಾದ ನೋವಿನಾಲಾಪವನ್ನು, ನಿರಂಕುಶ ಪ್ರವಾಹಕ್ಕೆ ಬಿಟ್ಟುಕೊಡಲು ನಾನು ಸಿದ್ಧವಾಗಿಲ್ಲ. ಅವರ ಚಿರಸೌಖ್ಯಕ್ಕೆ ಕಾರಣನಾಗುವುದು ನನ್ನ ಧರ್ಮ. ಸುಮ್ಮನೆ ಕವಿ, ನೀಲನೀಲಾಕಾಶ, ತಾರಾಗಣ, ನೀಲನೀಲಾಂಗದ ಬಣ್ಣವನ್ನು ಮಾತ್ರ ಬಣ್ಣಿಸದೆ; ಮುಂದೆ ಅಬಲೆಯರ ಬಾಳಕಣ್ಣೀರಿನ ವರ್ಣನೆಯನ್ನು ಚಿತ್ರಿಸಿ ಜನರು ಅಚ್ಚರಗೊಂಡು ತಿದ್ದಿ ನಡೆದುಕೊಳ್ಳುವಂತೆ ಮಾಡುವೆ ಎಂದು ಕಾಂತ, ನದೀತೀರದ ತನ್ನ ಜಾಗದಲ್ಲಿ ಶಪಥಮಾಡಿಕೊಂಡ. ಇನ್ನುಮುಂದೆ ನನ್ನನ್ನು, ಆಶ್ರಯಹೊಂದಿರುವವರನ್ನು ಯಾರೂ ಕುರುಡು ಕಣ್ಣಿನಿಂದ ನೋಡಲಾಗದು. ಎಂದು ನೆನೆಯುತ್ತಾಯಿದ್ದ.

ಕಾಂತ ಆದಿನ ಚಂದ್ರಿಕೆಗೆ ದೊಡ್ಡ ಉಪನ್ಯಾಸ ಮಾಡಲು ಬಂದು " ತಾಯಿ! ಜನರನ್ನು, ಜನತೆಯನ್ನು, ಅವರ ವ್ಯೈಕಾಂತಿಯನ್ನು ತಿಳಿದು ಗುಣಾವಗುಣಗಳನ್ನು ನಿರ್ಣಯಿಸುವುದಕ್ಕಾಗುವುದಿಲ್ಲ. ಅವರು ಯೋಚಿಸುವ ವಿಚಾರ, ಆಚರಿಸುವ ವಿಚಾರದಿಂದಲೇ ಗುಣವರ್ಣನೆ ಇತ್ಯರ್ಥವಾಗುವುದು. ದಿವಿಜಪುರವಾಸಿಗಳು, ಸಲ್ಲದ ಕಥೆಕಟ್ಟಿ ನನ್ನನ್ನು ದೂರಮಾಡಿದರು. ಜನರು ನನ್ನನ್ನು ಮಂದಭಾಗ್ಯನೆಂದು ದೂರಮಾಡಿದರು ಸರಿಯೆ, ನಾನು ದಿವಿಜಪುರ ನನ್ನ ಮನೋಲ್ಲಾಸಪುರವನ್ನು ಬಿಟ್ಟು ಹೊರಡಲಾರದವನಾದೆ. ಜನರಿಂದೇನಾದೀತು? ನನ್ನನ್ನು ಅವರು ತೊರೆದರೇನಾಯಿತು! ನನಗೆ ದಿವಿಜಪುರ ಮಂದಾರವೃಕ್ಷದಂತೆ ನನಗೆ ಅನುಕೂಲ

ಸಾದ ಠಾವು. ನನ್ನ ಪಾಡಿಗೆ ಇತರ ಸಂಪರ್ಕವಿಲ್ಲದೆ ಏಕಾಂತ ಜೀವನ ನಡೆಸುತ್ತಿಲ್ಲವೆ? ರಾಮುನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಲು ಉಪದೇಶಿಸಿದ ಮಂಥರೆಯಂತೆ, ಪುರವಾಸಿಗಳೆಲ್ಲ ನನ್ನನ್ನು ಭ್ರಷ್ಟನನ್ನಾಗಿ ಮಾಡಲು ಒಮ್ಮೆ ಯತ್ನಿಸಿದರು. ಮಂಥರೆಯಂತಿರುವ ಕಗ್ಗೂಬೆ ಕುಬ್ಜೆಯ ಮಾತು ಕೇಳುವವರಾರು? ಅವರನ್ನು ನಾನು ಅಲಕ್ಷ್ಯಮಾಡಿಬಿಟ್ಟೆ. ತೀರ ಮುಳ್ಳಿನ ಹಾದಿಯಲ್ಲಿ ನಿಲ್ಲಬೇಕಾಯಿತು. ನಾನೋ ಇರುವವನು ಒಬ್ಬ; ನಿಮ್ಮೆಲ್ಲರನ್ನೂ ಎದುರಿಸಿಯೇ ನಿಲ್ಲುತ್ತೇನೆಂದು ಹಟಹಿಡಿದು ನಿಂತೆ. ಈಗ ನಿಮ್ಮ ನೆರವು ಸಿಕ್ಕಿದೆ. ಮುಂದೆ ಏನು ನಡೆಯುವುದೋ" ಎಂದ.

"ನಾವಿಬ್ಬರೂ ಇಲ್ಲಿ ನಿಂತಿರುವುದನ್ನು ಕೇಳಿದ ಜನರು, ನಿಮ್ಮನ್ನು ಮತ್ತೂ ಹೀಯಾಳಿಸುವುದಿಲ್ಲವೆ, ಮತ್ತಷ್ಟು ಅಪಚಾರದ ಮಾತು ಹರಡುವುದಿಲ್ಲವೆ?"

"ಹೊಸದಾಗಿ ಅವರೇನು ಪ್ರಚಾರಮಾಡುವುದು? ಈಗಾಗಲೇ ಹೇಳುತ್ತಿದ್ದಾರೆ; ಇವನಿಗೊಂದು ಭ್ರಾಂತಿ. ಹೀನರನ್ನು ಮನೆಯೊಳಗೆ ಸೇರಿಸಿಕೊಂಡಿದ್ದಾನೆ. ಸ್ವೇಚ್ಛೆಗಾರನ ಸೆರೆಯಲ್ಲಿ ಹೀನರಿಗೆ ಸ್ಥಾನದೊರೆತಿದೆ" ಎನ್ನುತ್ತಲಿದ್ದಾರೆ ಎಂದ ಕಾಂತ.

"ಇದೆಲ್ಲವನ್ನೂ ಕೇಳಿದ ಚಂದ್ರಿಕೆ, ನಮ್ಮ ದೆಶೆಯಿಂದ ಅಲ್ಲವೆ.... ............" ಎಂದು ಮುಗಿಸುವುದಕ್ಕೆ ಮುಂಚೆಯೇ........

"ಸಿರಿಯ ಸ್ವರ್ಗದಲ್ಲಿ ಸುಖದ ಸುಗ್ಗಿಯನ್ನು ಕಾಣುವುದು ದಿಟ. ದಿವಿಜಪುರ ದೀಪಮಾಲೆಗಳಿಂದ ಸಿರಿಯಿಂದ ಶೋಭಿಸುತ್ತಿದೆ. ಆದರೆ ಜನರು, ಬಲ್ಲಿದ ಜನರು ಮಮತೆ ತುಂಬಿದ ಕಣ್ಣಿನಿಂದ ದೀನ ಜನರನ್ನು, ತೀರ ತುಳಿಯಲ್ಪಟ್ಟ ಜನರನ್ನು ನೋಡುತ್ತಿಲ್ಲ. ಹಸನಾದ ಹೃದಯವೇ ಅವರಿಗಿಲ್ಲ. ಬಾಯಿತುಂಬಾ ಕರುಣೆಯ ಮಾತನಾಡಬಹುದು, ತಮ್ಮ ಕೈಲಾದಷ್ಟು, ಒಂದು ಹಿಡಿಯಷ್ಟು ಸಹಾಯ ಮಾಡುವುದು ದುರ್ಲಭ. ಸುಖದ ಸುಪ್ಪತ್ತಿಗೆಯ ಮೇಲೆ ಕುಳಿತು, ಮನಬಂದಂತೆ ಟೀಕಿಸಿದರೇನಾಯಿತು?" ಎಂದು ಚಂದ್ರಿಕೆಗೆ ಸಮಾಧಾನಹೇಳಿ ಹೊರಟ. ನದೀ ತೀರಕ್ಕೆ ತನ್ನ ಲೇಖನ ಎಡೆಗೆ ಬಂದು ಕುಳಿತು, ಇದೇ ವಿಚಾರವನ್ನು ಯೋಚಿಸಲಾರಂಭಿಸಿದ.

ಚಂದ್ರಿಕೆ, ಸಿಂಗಾರ ತೊರೆದು ಯಮುನ ಸನ್ನಿಧಿಗೆ ಹೋಗುವ ದಿನ ಹತ್ತಿರವಿದೆಯೆಂದು ಹೇಳುತ್ತಿದ್ದಾಳೆ. ಇನ್ನು ಅಬಲೆ, ಬಾಲೆ, ಹೂಮಾಲೆ ಅಲಕಾವಿನ ಗತಿಯೇನಾಗಬೇಕು? ನಿಟ್ಟುಸುರನ್ನು ಬಿಟ್ಟು ತಾ ಕುಳಿತಲ್ಲಿ ಜನರಿಂದ ಅನ್ನ ದೊರೆಯುವುದೆ? ಜಾರಕಥೆ ಕಟ್ಟಿ, ಅಪವಾದದ ಆಕಾರ ಬೆಳೆಸಿ, ಜನರೇನು ಮುಗಿಸುವರು. ಅಬಲೆ ವ್ಯರ್ಥಾಲಾಪ ಕೇಳಿ ಬೇಸರ ಪಟ್ಟು ನೀರಿನ ತಳ ಕಾಣುವುದು ಖಂಡಿತ. ಯಾವ ಊರೂ ಧರ್ಮದ ತೌರೂರಲ್ಲ. ಧರ್ಮಾಭಿಮಾನಿಗಳು ಬಹಳವಿರುತ್ತಾರೆ. ಧರ್ಮದ ಹೆಸರಿನಲ್ಲಿ ದೀನರಿಗೆ ಕಳಂಕದ ಕಾಡಿಗೆಹಚ್ಚಿ ತಮ್ಮ ಸ್ವಾರ್ಥ ಸಾಧಿಸಿಕೊಳ್ಳುತ್ತಲೇ ಯಿರುತ್ತಾರೆ. ಹೀಗೆ ನಡೆದಿರುವಾಗ ಮಿಕ್ಕವರ ಪಾಡೇನು? ಅವರು ಉಕ್ಕಿ, ಕೊರಲು ಬಿಗಿದುಕೊಂಡು ಕಣ್ಣುಮುಚ್ಚಬೇಕೆ ಎಂದು ತಿಳಿಯುತ್ತಾ ಕಾಂತ ಮನೆಗೆ ಬಂದ.

ಚಂದ್ರಿಕೆ ಬಾಗಿಲಲ್ಲಿಯೇ ಕುಳಿತಿದ್ದಳು. ಕಾಂತನ ಮನೆಸೇರಿ ಬಹಳ ದಿನಗಳಾಗಿಹೋಗಿತ್ತು. ಲೇಖಕನ ಚರ್ಯೆ, ಅವನ ನಿತ್ಯದ ಕರ್ಮಾನು ಷ್ಠಾನ, ತಪೋಸೇವೆ ಅವಳು ಕಂಡುಕೊಂಡು; ಇಂತಹ ಸಚ್ಚರಿತನಿಗೆ ಹೀಗಾದರೆ ನಮ್ಮದೇನು ಎಂದೆನ್ನುತ್ತಾ ಕುಳಿತಿದ್ದಳು. ಇವನು ಯಾವ ಹೆಚ್ಚಿನ ಸುಖಕ್ಕಾಗಿ ಈ ಊರಿನಲ್ಲಿ ನಿಂತಿದ್ದಾನೆ. ಸಿರಿಯನ್ನು ಹೆಚ್ಚಾಗಿ ದೇಹವನ್ನು ದಂಡಿಸುತ್ತಾ ಏಕಾಂತವಾಸದಲ್ಲಿ ದಿನಗಳನ್ನು ಕಳೆಯು ತ್ತಿದ್ದಾನೆ? ಇವನು ಈ ಚಿಕ್ಕವಯಸ್ಸಿನಲ್ಲಿ ಯಾವ ಮಹಾಸಾಧನೆಗಾಗಿಯೋ ತನ್ನ ಸೌಭಾಗ್ಯದಿನಗಳನ್ನು ಕಳೆಯುತ್ತಿರುವನಲ್ಲಾ ಎಂದವಳು ಮೆಲ್ಲನೆ, "ನಮಗೆ ಇನ್ನು ಯಾವ ಹೊಸ ಹಾದಿಯಿರುವುದು, ಅಲಕಾವಿನ ಗತಿ ಹೇಗೆ?" ಎಂದು ಕಾಂತನನ್ನು ಪ್ರಶ್ನಿಸಿದಳು.

"ಒಮ್ಮೆಯೇ ನೂರಾರು ಪ್ರಶ್ನೆಗಳಿಗೆ ಉತ್ತರ ಹೇಳುವುದು ಕಷ್ಟ. ನಿಮಗೆ ಇರಲಿಕ್ಕೆ ಅಭಯಕೊಟ್ಟಾಯಿತು. ನನ್ನ ಮತ್ತು ನಿಮ್ಮ ಸುಖ ದುಃಖ ಪರಸ್ಪರ ಹಂಚಿಕೆಯಾಗಿ ಹೋಗಿರುವಾಗ ಮತ್ತೇನು ಭಯ" ಎಂದ ಕಾಂತ.

"ಹಾಗಾದರೆ ಇನ್ನು ಏನೂ ಯೋಚಿಸಿ, ದಾರಿ ಹಿಡಿಯಲಿಲ್ಲವೆ?" ಎಂದು ವೃದ್ಧೆ ಆತುರದಿಂದ ಪ್ರಶ್ನಿಸಿದಳು.

"ಇನ್ನೂ ಹಿಡಿದಿಲ್ಲ,ರಾಜ್ಯವನ್ನು ಒಂದೇ ದಿನದಲ್ಲಿ ಕಟ್ಟಲಾಗುವುದಿಲ್ಲ"

"ಆಗುವುದಿಲ್ಲ ದಿಟ, ನಿಮ್ಮ ಆಶ್ರಯದಲ್ಲಿ ಎಷ್ಟು ದಿನ ನಾವು ನಿಂತಿರುವುದು?"

"ಎಷ್ಟು ದಿನವೋ ಹೇಳಲಾಗುವುದಿಲ್ಲ. ಧೈರ್ಯ ಎಂಬೆರಡಕ್ಷರದ ಮಾತನ್ನು ನಂಬಿರಬೇಕು" ಎಂದ ಕಾಂತ.

ಈ ನಡುವೆ ಮುಪ್ಪಿನ ಮಾತು ಬಂತು. "ತಾಯಿ ಮೃತ್ಯುವಿನ ಮಾತು ಮತ್ತು ಭಯ ಯಾರಿಗೂ ತಪ್ಪಿದ್ದಲ್ಲ. ನೀವು ಕಣ್ಮರೆಯಾಗುವರೆಂದು, ಅಲಕಾವಿನ ಚಿಂತೆಯನ್ನು ಹೆಚ್ಚಿಗೆ ಮಾಡಿಕೊಂಡಿರುವಿರಿ. ಅತಿ ವೈಭವದಲ್ಲಿ ಮೆರೆದ ನಗರವೂ ಮಣ್ಣು ಪಾಲಾಗಿ ಹೋಗಿಲ್ಲವೇನು? ಮಾನವ ಮರಣಕ್ಕಾಗಿ ಅಂಜದೆ, ತನ್ನ ವೈಯುಕ್ತಿಕ ವ್ಯಕ್ತಿತ್ವಕ್ಕೆ ಬೆಲೆ ಕೊಟ್ಟರೆ ಒಳ್ಳಿತು. ಮರಣ ಖಂಡಿತವಾಗಿಯೂ ತಪ್ಪದು ಎಂದಮೇಲೆ, ಅದಕ್ಕಾಗಿ ಮರುಗುವುದು ಮೂಢತನವಲ್ಲವೆ! ಬರುವುದೆಲ್ಲಾ ಬರಲಿ, ನಾವು ಸಿದ್ಧವಾಗಿರೋಣ ತಾಳ್ಮೆಯಿಂದಿರುವುದನ್ನು ಮಾತ್ರಾ ಮರೆಯುವುದು ಬೇಡ" ಎಂದ.

ಈ ಮಾತು ಕೇಳಿ ಚಂದ್ರಿಕೆ ನೊಂದಹೃದಯ, ಬೆಂದ ಮನಸ್ಸು ಉಲ್ಲಾಸಗೊಂಡಿತು. ಕಾಂತನ ಶಕ್ತಿಯ ಸತ್ವವನ್ನು ಅವಳು ಅರಿತುಕೊಂಡಳು. ಇವನ ಉಪದೇಶದಿಂದ ಏನಾದರೂ ಒಳಿತಾಗುವುದೆಂಬ ನಂಬಿಕೆ ಅವಳಿಗೆ ಬಂದಿತು. ಈ ವಾಙ್ಮಯವೀರನಿಗೆ ತಪ್ಪುಒಪ್ಪುಗಳ ನಿರ್ಣಯ ಮಾಡುವವನಿಗೆ ಈ ಊರಿನ ಜನರು ನಮಗೆ ಮಾಡಿರುವಂತೆ ಅನ್ಯಾಯ ಮಾಡಿದ್ದಾರೆ. ಸಂಪ್ರದಾಯಗಳನ್ನು ಮುರಿದು ತತ್ವಪೋಷಣೆ ಮಾಡುತ್ತಿರುವ ಈ ಪುಣ್ಯಪ್ರಭಾವಿಗೆ ಶೂನ್ಯ ಸಿಂಹಾಸನ ಕೊಡಿಸಿದ್ದಾರೆ. ಇವನಿಂದ ಶುಚಿ, ಸಮಾನತೆ, ಬಲ್ಮೆ, ಬೆಂಬಲ ಎಲ್ಲರಿಗೂ ಸಿಗುವುದು ಖಂಡಿತ. ನಮಗೂ ಹಾದಿ ಸಿಕ್ಕಬಹುದು, ಎಂದು ನೆನೆದು ದೀರ್ಘ ಉಸಿರೆಳೆಯುತ್ತಾ ಚಂದ್ರಿಕೆ ಕುಳಿತುಬಿಟ್ಟಳು.

೬

ಒಲವಿನ ಪ್ರೋತ್ಸಾಹ ಕಾಂತನಿಂದ ದೊರೆಯುವುದು, ಹೊಸ ಜೀವನದ ಅರುಣೋದಯವಾಗುವುದು, ತಾಯಿಕೃಪೆಯಿಂದ ಅನಂತಶಕ್ತಿ ಬರು

ವುದು, ಉಜ್ವಲ ಸಿದ್ಧಿಯಾಗುವುದು ಎಂದು ಅಲಕಾ ಮೌನದಿಂದಿದ್ದಳು. ಪ್ರಸನ್ನಮೂರ್ತಿ ಕಾಂತನ ಪ್ರಭಾವಕ್ಕೆ ಸಿಲುಕಿದ ಅಲಕಾ, ತನ್ನ ಸ್ತ್ರೀ ಸಹಜ ಸ್ವಭಾವದಿಂದ ಅವನನ್ನು ಮೆಚ್ಚಿಸಲು ಯತ್ನಿಸಿದಳು. ಸ್ವರ್ಗೀಯ ಸಂಗೀತ ಹೃದಯಕ್ಕೆ ಮುಟ್ಟಿ ಅಂತರಂಗವನ್ನು ಬೆಳಗುವಹಾಗವಳು ಗೃಹದಲ್ಲಿ ಬೆಳಗುತ್ತಿದ್ದಳು. ಜೀವಂತ ಲೋಕವಾಣಿ, ತನ್ನ ನಡವಳಿಕೆ ಯಿಂದ, ಸೇವೆಯಿಂದ ಕಾಂತನಿಗೆ ಹೆಚ್ಚು ಆನಂದ ನೀಡುತ್ತಾ ನಿಂತಾಗ; ಹೊರಪ್ರಪಂಚದ ಹೆಂಗಸೆಂದರೆ ಬೀಳು ಬೀಳಾರ್ಥವೆಂದು ಪರಿಗಣಿಸಿದ ಜನರು, ಸ್ತ್ರೀ ಸರ್ವವ್ಯಾಪಕ ಶಕ್ತಿಯನ್ನು ತಿಳಿಯಲಿ ಎಂದುಕೊಂಡ ಕಾಂತ.

ಕಥಾಕಲೆಯ ರಹಸ್ಯ, ಪಾತ್ರಸಂವಿಧಾನ, ಅರ್ಥವತ್ತಾಗಿ ಹೃದಯಕ್ಕೆ ನಾಟುವಂತೆ ಚಿತ್ರಿಸುವಂತಹ ಕಲಾಕುಸುರಿ ಕಾಂತ; ಆದಿಯಿಂದ ಅಂತ್ಯದ ವರೆಗೆ ಚಂದ್ರಿಕೆ ಗೋಳನ್ನು ತಿಳಿದುಕೊಂಡು ಅವಳ ಹೃದಯವಂತಿಕೆ ಯನ್ನು ಅರಿತುಗೊಂಡಿದ್ದ. ಮುಖ್ಯವಾಗಿ ಲೇಖಕ ಬರೆಯುವ ವಿನ್ಯಾಸದ ತಿರುಳೇನು? ವ್ಯಕ್ತಿಗಳ ಸೃಷ್ಟಿಯಲ್ಲಿ ಉಂಟಾಗುವ ಅಥವಾ ತೋರುವ ಲೋಪದೋಶಗಳು ತಾನೆ! ಹೃದಯಕ್ಕೆ ನಾಟುವಂತೆ ಚಿತ್ರರಚಿಸುವ ಮಾನವಶಿಲ್ಪಿ ತನ್ನ ಹೃದಯುವನ್ನೇಕೆ ಶುಚಿಯಾಗಿಟ್ಟುಕೊಂಡು ಪೂಜಿಸುವ ವ್ಯಕ್ತಿಯನ್ನು ಚಿತ್ರಿಸಿ, ಸತ್ಪರಿಣಾಮವನ್ನು ಕಾಣಬಾರದು?

ಸಂಪ್ರದಾಯ ಶೃಂಖಲೆ ಹಿಡಿತಕ್ಕೆ ಸಿಕ್ಕಿ, ನೊಂದವರನ್ನು ಉದ್ಧರಿಸಲು ಟೊಂಕಕಟ್ಟಿ ನಿಂತವನು ಆತುರಪಟ್ಟರಾಗುವುದೇನು? ಕ್ರಾಂತಿಕಾರನಿಗೂ ಸಂಪ್ರದಾಯ ಪಕ್ಷದವರಿಗೂ ಘರ್ಷಣೆಯಾಗುತ್ತಲೇ ಇರುತ್ತದೆ. ಕಾಂತ ತನ್ನ ಶುಚಿ ಲೇಖಣಿಯಿಂದ ನೆನೆದ ಉದ್ದೇಶ ಸಾಫಲ್ಯಗೊಳಿಸಲಿಕ್ಕೆ ಸಿದ್ಧನಾಗಿದ್ದ. ಕಲುಷಿತ ಆವರಣವನ್ನು ಸರಿಪಡಿಸಿ, ಒಳ್ಳೆಯ ಬಹುದ್ರೂಪವನ್ನು ಜನರ ಕಣ್ಣಿಗೆ ಕಟ್ಟುವಂತೆ ಬೋಧಿಸಬೇಕೆಂದಿದ್ದ.

ಮಾನವರ ಅಂತರಾಳಕ್ಕೆ ನೇರವಾಗಿ ತಟ್ಟುವ ತೀವ್ರ ಭಾವನಾತರಂಗ ಗಳನ್ನು, ದಿವ್ಯಜ್ಯೋತಿಯ ಕಿಡಿಗಳನ್ನು, ಪ್ರೀತಿಪೋಷಕ ಸಾಮಗ್ರಿ ಯನ್ನು, ಪ್ರೀತಿ-ಒಲವು ಇವುಗಳ ನಾನಾಮುಖಗಳನ್ನು ಚಿತ್ರಿಸಬಲ್ಲ ಶಿಲ್ಪಿಯ ಅಂತರಾಳದಲ್ಲಿ ಗುಪ್ತಗಾಮಿನಿ ಸಂಚರಿಸುತ್ತಲೇ ಇರಬೇಕು! ನಿರ್ಮಲ ಮನಸ್ಸಿದ್ದ ಮೇಲೆ ಅಲ್ಲಿ ಒಳ್ಳೆಯ ಭಾವನೆಗಳು ಮೊಳೆ

ಯುತ್ತಲೇ ಇರಬೇಕು. ಹೃದಯಪರಿಶುದ್ಧತೆಯೆಂದರೆ, ಧರ್ಮದ ತಿರುಳೇ ಅಲ್ಲವೆ? ಸಮಾಜದ ಸರ್ವತೋಮುಖ ಏಳ್ಗೆಯನ್ನು ಬಯಸುವವರು ಹಲವರಿದ್ದಾರೆ. ಹೀಗೆ ಬಯಸುವಂತಹ ಜನರೆದುರಾಗಿ ದುಷ್ಟರು ಇರುತ್ತಾರೆ ದೃಢವಿಶ್ವಾಸದಿಂದ ಸ್ವಕೀಯ ರಾಜ್ಯರಚನೆಯಲ್ಲಿದ್ದ ಕಾಂತನ ತೊಡಕಾಗಿ ಬೇರೊಬ್ಬ ವ್ಯಕ್ತಿಯಿದ್ದ. ಅವನೇ ತಾರಾಪಥ. ಇವನು ಕ್ರಾಂತಿಪುರುಷ ಕಾಂತನನ್ನು ಪಾತಾಳಕ್ಕೆ ಒಯ್ಯಬೇಕೆಂದು ಸದಾ ಯತ್ನಿಸುತ್ತಿದ್ದ. ಕಾಂತ ಚರಿತ್ರಹೀನನೇ ಸರಿ, ಅವನಿಂದ ಜನರಿಗೆ ಕೇಡೇನೂ ಸಂಭವಿಸಿರಲಿಲ್ಲ. ಲೇಖನಾ ಕಾರ್ಯದಲ್ಲಿ ತತ್ಪರಾಯಣನಾಗಿದ್ದ ಕಾಂತನಿಗೆ, ಕೆಲವರ ಸಹಕಾರವೂ ದೊರೆಕಿತ್ತು. ಕಾಂತ ಅವರ ದೃಷ್ಟಿಯಲ್ಲಿ ಧೀಮಣಿಯೆನಿಸಿಕೊಂಡಿದ್ದ. ಲೇಖಕನಿಗೆ ಎಲ್ಲವೂಯಿತ್ತು: ಹಣ್ಣು, ಹೂವು, ರನ್ನ, ನಕ್ಷತ್ರ, ಸಂಗೀತ ಎಲ್ಲವೂಯಿತ್ತು. ಈ ವಿಶಾಲಹೃದಯಿ, ಮಾನವ ಕುಲದ ಕಲ್ಯಾಣಕ್ಕಾಗಿ ದುಡಿಯಬೇಕೆನ್ನುತ್ತಿದ್ದವನಿಗೆ ಎದುರಾಗಿ ಸ್ವಾರ್ಥಿ ತಾರಾಪಥನೊಬ್ಬನಿದ್ದ.

ಉನ್ನತಿಗಾಗಿಯೇ ಹೊಸ ಹೊಸ ವಿಚಾರಗಳನ್ನೆತ್ತಿ ಹಿಡಿದು ಕಾಂತ ಸಾಧಿಸುತ್ತಿದ್ದುದು ದಿಟ. ಹೊಸ ಸನ್ನಿವೇಶವನ್ನೇ ಆದರ್ಶವನ್ನೇ ಎತ್ತಿ ಹಿಡಿದು ನಿಂತಾಗ, ಅವನೊಂದಿಗೆ ಜತೆಯಾಗಿ ಯಾರೂ ನಿಲ್ಲಲು ಬಯಸಲಿಲ್ಲ. ಜೀವನರಂಗದಲ್ಲಿ ಹೋಗಲಿ, ಸಾಧನೆಯಲ್ಲಿಯಾದರೂ ನಿಲ್ಲ ಬಯಸಲಿಲ್ಲ. ಲೇಖಕನ ವೈಯುಕ್ತಿಕ ಜೀವನದಲ್ಲಿಯೂ ತಿಳಿಬೆಳದಿಂಗಳ ಬೆಳಕನ್ನು ಚಲ್ಲುವಂತಹ ಚಲುವೆಯಿರಲಿಲ್ಲ.

ತಾರಾಪಥ, ಕಾಂತನಿಗೆ ಅಡ್ಡವಾಗಿ ನಿಂತನೇಕೆ? ಮಳೆಗೆ ಮುನ್ನ ಬಿಸಿಲು ಕಾಯುತ್ತದೆಯಲ್ಲವೆ! ಆದರ್ಶಪ್ರಿಯ ಕಾಂತ, ಅಂತಃಕರಣ, ಸ್ವಾಭಿಮಾನ, ಪ್ರೀತಿವಾತ್ಸಲ್ಯಗಳ ನೆಲೆಯಲ್ಲಿ ಬಾಳಬೇಕೆಂದು ನಿರೀಕ್ಷಿಸಿದ್ದ. ಚಿತ್ತ ನಿರ್ಮಲವುಳ್ಳವನಿಗೆ, ಧೃತಿಯಿಂದ ತಲೆಯೆತ್ತಿ ನಡೆಯಬೇಕೆನ್ನುವವನಿಗೆ ಎದುರಾಗಿ ಮತಿಗೆಟ್ಟ ಮನುಷ್ಯ ಹಾದಿಯಲ್ಲಿ ಹೊಲಸು ಹರಡುವ ಯತ್ನಮಾಡುತ್ತಾನೆ. ಮತಿಗೆಟ್ಟವನಿಗೆ ಯಾವ ಉದ್ದೇಶವಿದ್ದೀತು? ಸ್ವಾರ್ಥದಭೂತ ಅವನೆದೆ ಹೊಕ್ಕಿರುತ್ತದೆ. ಭೂತದಚೇಷ್ಟೆಯಿಂದ ಆದರ್ಶಪ್ರಿಯ ಸಂಕಟಕ್ಕೀಡಾಗುತ್ತಾನೆ.

ತಾರಾಪಥ ಸ್ವಾರ್ಥಿ. ದುರಹಂಕಾರಿ. ಬಲಿದಾನ ಮಾಡಿದ್ದ ಕಾಂತನ ಒಳಹೃದಯ ಅವನಿಗೆ ಹೇಗೆ ಗೊತ್ತಿರಬೇಕು? ಪುರೋಭಿವೃದ್ಧಿಗೆ ಕಾಂತ ಮನಸ್ಸು ಕೊಟ್ಟಿದ್ದ. ಕಾಂತ ಸ್ತ್ರೀಹೃದಯದ ಕಥೆಯನ್ನು ಚಿತ್ರಿಸಿದಂತಹ ವ್ಯಕ್ತಿ. ತಾರಾಪಥ ಸ್ವಾರ್ಥಸಾಧಕ. ಮುನ್ನುಗ್ಗುವವರನ್ನು ಹಿಂದೆಳೆದು ಹಿಂಸಿಸಿ, ನಾಶಮಾಡುವಂತಹ ಬುದ್ಧಿ ಅವನದು. ಪ್ರೇಮದ ಕಣ್ಣನ್ನು, ನಗುವ ಮಂಜುಳಧ್ವನಿಯನ್ನು, ಹಿಡಿತಕ್ಕೆ ಸಿಕ್ಕುವಂತಹ ಕನಸ್ಸಿನ ಮನಸ್ಸನ್ನು ನೂರಕ್ಕೆ ನೂರು ಯಾರು ಅನುಭವಿಸಿರುತ್ತಾರೆ? ಬೆಳದಿಂಗಳಿನಂತೆ ಮನಮೋಹಕವಾಗಿ, ಮುಗ್ಧೆಯಾಗಿ, ಹೂವಿನಮಾದರಿ ಹರ್ಷದ ಬೊಂಬೆಯಂತೆ ಅಲಕಾವನ್ನು ಕಾಂತ ತನ್ನ ಪ್ರೇಮಪ್ರಪಂಚಕ್ಕೆ ಸೆಳೆಯಬೇಕೆಂದಿದ್ದ. ಆದರೆ! ಲಾವಣ್ಯದ ಕಿನ್ನರಿಗೆ, ತನ್ನ ಘೋರವಿಕಟತ್ವ ಚರಿತ್ರಹೀನ ಜೀವನವನ್ನು ಹೋಲಿಸುವುದೇ ಎಂದವನಿಗೆನಿಸಿತು. ಅಪವಾದದ ಸುಳಿಗೆ ಸಿಕ್ಕಿ, ತನ್ನನ್ನು ನಂಬಿದ್ದ ಹೆಂಗಳೆಯರಿಬ್ಬರನ್ನು ಕಣ್ಣುಮುಚ್ಚಾಲೆಯಾಟವಾಡಿಸುತ್ತಾ ಸಮಾಜವಿರುವುದನ್ನು, ತಾರಾಪಥನಂತಹ ಕೇಡುಗ ಅಡ್ಡವಾಗಿರುವುದನ್ನು ಕಾಂತ ನೆನೆಯುತ್ತಲೇಯಿದ್ದ. ಪ್ರೇಯಸಿ, ಲಾವಣ್ಯದ ಕಿನ್ನರಿ ಅಲಕಾವನ್ನು ಅವನು, ಕನಸಿನಲ್ಲಿ ಪೂಜಿಸುತ್ತಾ ಸನ್ನಾಹಮಾಡುತ್ತಲೇ ಇರುತ್ತಿದ್ದ.

ದುಷ್ಟಪ್ರಭುವಿನ ಕೈ ಮೇಲಾಗಿತ್ತು. ಇತರರು ಗುಲಾಮರು. ನನ್ನ ಆಶ್ರಯವಿಲ್ಲದೆ ಅವರು ಜೀವಿಸಲಾಗದು ಎಂದು ಪ್ರತಿಷ್ಠೆಯಿಂದ ತಾರಾಪಥ ಕಾಂತನನ್ನು ನೋಡುತ್ತಿದ್ದ. ನಾನು ಯಾರಿಗೂ ಬಾಗುವುದಿಲ್ಲ. ಅಂತಃಕರಣ ಸನ್ನಿಹದಲ್ಲಿ, ಸ್ವಾತಂತ್ರ್ಯದೇಗುಲದಲ್ಲಿ ನಾನು ಬಾಗುವನೇ ಹೊರತು, ಪ್ರತಿಷ್ಠಿತನೆದುರಿಗೆ ಸ್ವಾತಂತ್ರ್ಯವನ್ನು, ಅಭಿಮಾನವನ್ನು, ತ್ಯಜಿಸಿ ಬಾಗುವುದಿಲ್ಲ ಎಂದು ಕಾಂತ ಹಟ ತೊಟ್ಟಿದ್ದ.

ಇವರಿಬ್ಬರ ಕೈಹಿಡಿತ ಬಿಗಿಯಾಯಿತು, ಮತ್ತೂ ಬಿಗಿಯಾಯಿತು. ಮಹಿಳೆಯರಗತಿ? "ಅನ್ಯಾಯ, ಅಧರ್ಮದಲ್ಲಿ ಮುಳುಗಿರುವ ತಾರಾಪಥ ನಮ್ಮೆಲ್ಲರನ್ನು ನುಂಗಲು ಯತ್ನಿಸಿದ್ದಾನೆ. ನಾವು ಮೈತ್ರಿ ಮಂಗಳತೆಯಿಂದ ಪುನೀತರಾಗೋಣ, ಇಲ್ಲವೆ ಎಲ್ಲರೂ ಮುಳುಗೋಣ" ಎಂದು ಕಾಂತ ಚಂದ್ರಿಕೆ-ಅಲಕೆಯರನ್ನು ಒಪ್ಪಿಸಿ, ಸಮಾಧಾನಹೇಳಿ ಯಾವ

ಘಟನೆಗೂ ಮನಸ್ಸು ನೋಯಿಸಿಕೊಳ್ಳಬಾರದೆಂದು ಸೂಚನೆಕೊಟ್ಟಿದ್ದ.

ಸಂವಾದಚತುರ ತಾರಾಪಥನಿಗೆ ಸಾಟಿಯಾದ ಸಂವಾದಿಯೆಂದರೆ ಕಾಂತನೆ. ಒಮ್ಮೆ ವಾದಕ್ಕೆ, ದೋಷಾರೋಪಣೆ ಹೂಡುವುದಕ್ಕಾಗಿ ತಾರಾಪಥ ಕವಿಯ ಭವನಕ್ಕೆ ಬಂದ. ತನ್ನನ್ನು ಕೆರಳಿಸಿ ಹೋಗುವುದಕ್ಕಾಗಿ ಇವನು ಬಂದಿರುವನೆಂದು ಕಾಂತನಿಗೆ ಸುಲಭವಾಗಿ ತಿಳಿಯಿತು. ಕಾಂತ ಮರುಕ ಭಾವದಲ್ಲಿದ್ದ. ಕಾರಣ? ಜೀವವೂ ಕಲ್ಪನೆಯೂ ಒಂದೇ ಮಾದರಿಯವು. ಒಕ್ಕಲುಗಾರರು ವಾಸದಮನೆಯ ಬಾಗಿಲು ಕಿಟಕಿಯನ್ನು ತೆರೆದು ಬೇಸರದಿಂದ ಹೊರಟುಹೋಗುವಂತೆ ಜೀವನವೂ ನೆನೆಯುತ್ತಿರುವ ವಿಚಾರಗಳೂ ಬೇಸರವಾಗಿ ತಾತ್ಸಾರಹುಟ್ಟಿಸಿದೆ ಎನ್ನುತ್ತಾ ಕಾಂತ ಏಕಾಂತ ಕೋಣೆಯಲ್ಲಿದ್ದ. ತಾರಾಪಥ ಕಾಂತನನ್ನು ಕೂಗುತ್ತಲೇ ಒಳಗೆ ಬಂದ. ನನ್ನನ್ನು ಈ ದಿನ ಕದನಕ್ಷೇತ್ರಕ್ಕೆ ಒಯ್ಯಲು ಬರುತ್ತಿದ್ದಾನೆಯೆನ್ನುತ್ತಲೇ ಕಾಂತ ಹೊರಗೆ ಬಂದು, ತಾರಾಪಥನನ್ನು ಬರಮಾಡಿಕೊಂಡ. ಅನಾಥ ಅಬಲೆಯರಿಬ್ಬರು ಭವನದಲ್ಲೆಲ್ಲೋ ದೂರವಾಗಿ ಉಳಿದಿದ್ದರು. ಅವರನ್ನು ಕಂಡು, ಟೀಕಿಸಿ ಕಾಂತನನ್ನು ಹಿಂಸಿಸಿ ಹೋಗಬೇಕೆಂದು ಬಯಸಿ ಬಂದಿದ್ದ ತಾರಾಪಥನಿಗೆ ನಿರಾಶೆಯಾಯಿತು.

"ಕಾಂತ ನೀನು ಬಯಸಿರುವಂತಹ ಬಯಕೆ ಹೆಬ್ಬಯಕೆ ಎಂತಹ ಅನರ್ಥದಲ್ಲಿ ಕೊನೆಗಾಣುವುದೆಂದು ತಿಳಿಯೆಯಾ?" ಎಂದು ಆರ್ಭಟಿಸುತ್ತಾ ತಾರಾಪಥ ಗುಡುಗಾಡಿದ.

ಶಾಂತಮೂರ್ತಿ ಕಾಂತ ದುಡುಕಲಿಲ್ಲ. ಸಮಾಧಾನದಿಂದಲೇ "ನನ್ನ ಬಯಕೆ, ಹೆಬ್ಬಯಕೆ! ನಾನು ಅಪವಾದವನ್ನು, ಕಷ್ಟನಿಷ್ಠೂರಗಳನ್ನು ಎದುರಿಸಿಯೇ ನಿಂತು ಹೆಬ್ಬಯಕೆ ಸಾಧಿಸಿಕೊಳ್ಳಬೇಕೆಂದಿರುವೆ" ಎಂದ.

"ನಿನ್ನ ಹಟಕ್ಕೆ ಅಡ್ಡಿಯೇ ಇಲ್ಲವೆ? ನಿರಾಶ್ರಿತರಾದ ಅಬಲೆಯರಿಗೆ ಸ್ಥಳಕೊಟ್ಟೆ ಏಕೆ? ಹೆಚ್ಚಿನ ಹವ್ಯಾಸ ನಡೆಸಿರುವೆ ಏಕೆ?" ಎಂದು ದುಷ್ಟಪ್ರಭು ಸಹಿಸಲಾರದೆ, ತನ್ನ ಹೊಟ್ಟೆಯಲ್ಲಿದ್ದ ಕೋಪವನ್ನೆಲ್ಲಾ ತೋರಿದ.

ಮತ್ತೆ ನಿಧಾನಿ "ನಿರಾಶ್ರಿತರು ಯಾರಾದರೇನು? ಹೆಣ್ಣು ಜೀವಕ್ಕೆ ಮಾನಮರ್ಯಾದೆಗಳಿಲ್ಲವೇನು?"

ಅಟ್ಟಹಾಸದಿಂದ ತಾರಾಪಥ "ಜನಸಮಕ್ಷದೆದರು, ಎಷ್ಟೋಬಾರಿ ಪತಿತರೆಂದು ಪರಿಗಣಿಸಲ್ಪಟ್ಟಿರುವುದನ್ನು ತಿಳಿಯೆಯಾ!" ಎಂದು ಕೂಗಿ ಕೊಂಡ.

"ಪತಿತರೋ ಪುನೀತರೋ ಯಾರು ಯಾರನ್ನು ನಿಶ್ಚಯಿಸುವುದು? ಘೋರತಿರಸ್ಕಾರಕ್ಕೆ ಸಿಕ್ಕಿದವರ ರಕ್ಷಣೆಗೆ ನಾನು ಸಿದ್ಧನಾಗಿಯೇ ಇರುತ್ತೇನೆ"

"ನೀನು ಮಾಡುತ್ತಿರುವುದು ಅಧರ್ಮಕೆಲಸ, ಅವರು ದೋಷಿಗಳೆಂದು ನಿನಗೆ ತೋರುವುದಿಲ್ಲವೆ?"

"ಚನ್ನಾಗಿಯೇ ತೋರುವುದು. ಅವರು ಪತಿತರೆಂದು, ದೋಷಿಗಳೆಂದು ವಿಮರ್ಶಿಸುವುದು ನಿಮ್ಮ ಕೆಲಸವಲ್ಲ; ಈ ಊರಿನ ಜನರದೂ ಅಲ್ಲ" ಎಂದು ಕಾಂತ ಖಚಿತವಾಗಿಯೇ ನುಡಿದುಬಿಟ್ಟ.

"ಹಾಗಾದರೆ ನಿನ್ನಿಂದ ಮಾನಹಾನಿಕರವಾದ ಕೆಲಸಕ್ಕೆ ಸಹಾಯವೊದಗಿದೆ, ಅಲ್ಲದೆ; ಇನ್ನೂ ಹೆಚ್ಚಿನ ಹಾನಿ ನೀನು ನಡೆಸುವವನಿದ್ದೀಯೆ ಅಲ್ಲವೆ!"

"ಹಾಗೇನೂ ಇಲ್ಲ. ಪತಿತರೆಂದು ಮಾಡಿರುವ ಜನರಿಗೆ ಸಹಾಯ ಮಾಡಲು ಇಚ್ಛಿಸಿರುವ ನಾನೂ ಒಬ್ಬ ಅಶುದ್ಧಪುರುಷನೆಂದು ತಿಳಿದಿರುವೆ."

"ನೀನೊಬ್ಬ ಅಶುದ್ಧಪುರುಷ, ಜಾರ....ಸ್ವಚ್ಛಂದ!"

"ಸೊಂಕನ್ನರಿಯದ ಅಬಲೆಯರಿಗೆ ಸಹಾಯಮಾಡಲು ಸದಾ ಸಿದ್ಧನಿರುವೆ, ಅವರಿಗಾಗಿ ಹೋರಾಡಲು ನಾನು ಸಿದ್ಧವಾಗಿಯೇ ಇರುತ್ತೇನೆ" ಎಂದು ಕಾಂತ ತಾರಾಪಥನಿಗೆ ಕೇಳುವಂತೆ ಕೂಗಿದ.

ಮಳೆಗಾಳಿಗಳ ಹೊಡೆತದಲ್ಲಿ ಸಿಡಿಲುಗುಡುಗುಗಳು ಆರ್ಭಟಿಸುವಂತೆ, ತಾರಾಪಥ ಗುಡುಗುತ್ತಾ ಹಠಾತ್ತನೆ ಹೊರಟುಬಿಟ್ಟ. ಇನ್ನೂ ಇವನ ಉದರದಲ್ಲಿ ಕೋಪವೆಷ್ಟು ಅಡಗಿದೆಯೋ ಏನೋ ಎಂದು ಚಿಂತಿಸುತ್ತಾ ಕಾಂತ ಕುಳಿತುಬಿಟ್ಟಿದ್ದ.

ಕವಿ, ಅಪಾರಯಾತನೆಯಿಂದ ಪರಿತಾಪಪಡುತ್ತಾ ಕುಳಿತಿದ್ದುದನ್ನು ಅಲಕಾ ನೋಡಿದಳು. ಕ್ಲೇಷ ಪರಾಭವ ತೋರೆಯುವ ಮೂರ್ತಿಯಂತೆ ಕಾಂತನೆದುರು ಬಂದು ನಿಂತಳು. ಕಾಂತ, ತಾರಾಪಥ ತೋರಿದ, ಆಡಿದ ನಾನಾ ಕುಟಿಲೋಪಾಯವನ್ನು, ಪ್ರಲೋಭನ ಜಾಲವನ್ನು ಅಲಕಾವಿಗೆ ವಿಸ್ತರಿಸಿದ.

“ಇವನೊಂದು ಬಗೆ. ಮತ್ತೊಬ್ಬನಿದ್ದಾನೆ. ಅವನಾಡುವ ಮಾತು, ರಸಪುಷ್ಟಿಯ ವಿಚಾರ, ಬಾಯುಪಚಾರ ನೀನು ತಿಳಿಯೆ! ಕಿಚ್ಚಿನಲ್ಲಿ ವಜ್ರಕರ್ಕಶವಾದ ಮನಸ್ಸು ಕರಗಲೇಬೇಕು. ಉಜ್ವಲ, ಸರ್ವಾಂಗ ಪೂರ್ಣವಾದ ನಮ್ಮೆಲ್ಲರ ಬಾಳಿನ ಬುಡಕ್ಕೆ ಸಮಾಜದ ಕ್ರೂರಶಾಸನದ ಪೆಟ್ಟು ತಗುಲಿದೆ. ಕ್ರೂರಶಾಸನ ವಿಷದ ಅಂಟಿನಿಂದ ಕೂಡಿರುವ ಶಾಸನವೇ ಸರಿ. ಸಮಾಜದ ಶಾಸನಕ್ಕೆ ದುರಭಿಮಾನಿಗಳು ಹಾಲಾಹಲದಂತಹ ವಿಷದ ಸೊಂಕನ್ನು ಏಕೆ ಅಂಟಿಸಿರುತ್ತಾರೆ? ಮೋಹದ ತುಂಬು ಹೊಳೆಯು ವಂತೆ, ಅವರು ರಚಿಸಿದಂತಹ ಕರಾಳ ಶಾಸನಕ್ಕೆ ಉದಾರಭಾವವಿರುವು ದಿಲ್ಲ. ಅನ್ಯಾಯದಮಾತು ಬೇಡ! ತಾರಾಪಥ ಒಮ್ಮೆಯೇ ಎಲ್ಲರ ಮೇಲೆ ಏಕೆ ದೂರುಹೇಳಲು ಇಲ್ಲಿಗೆ ಬರಬೇಕು? ಯಾವರೀತಿಯಿಂದ ಲಾದರೂ ನಮ್ಮನ್ನು ಕಾಡಿಸಬೇಕೆಂಬ ಯೋಜನೆ ಅವನು ಮಾಡಿರು ವಂತಿದೆ. ಕಾಡಿಸಲಿ, ಕೀಟಲೆಯೆಬ್ಬಿಸಲಿ ಯಾವ ಆಟವೂ ಸಾಗದು. ಅಲಕಾ! ಕಲ್ಪನಾತರಂಗದಲ್ಲಿ ಯಾರೂ ಮೇಲಿಲ್ಲ. ಅವರ ಯೋಜನಾ ವಿಸ್ತಾರ ವಿಶಾಲವಾಗಿಯೂ ಇರುವುದಿಲ್ಲ. ಚಿಂತೆ, ಬಯಕೆಗಳು ಅವರಿಗೆ ಬಹಳವಿರುತ್ತದೆ. ಎಲ್ಲವೂ ಅವರನ್ನು ಮುತ್ತಿಬಿಟ್ಟಿರುತ್ತದೆ. ಬೆಳ್ಳಿ, ಬಂಗಾರ, ಮೊದಲಾದ ಭಾಂಡಾರವನ್ನು ಕೋಶಾಧಿಕಾರಿ ತಕ್ಕಡಿಯಲ್ಲಿ ತೂಗಿ ಭದ್ರಪಡಿಸುವಂತೆ; ಈ ಸಮಾಜ ಧುರೀಣರು ದೀನನಾಥರ ಸುಖ ದುಃಖವನ್ನು ಆಳುವ ಅಳೆಯುವ ಜನರೆಂದು ತಮಗೆ ತಾವೇ ತಿಳಿದು ಕೊಳ್ಳುತ್ತಾರೆ.

ಹೊನ್ನ ಬೆಳಕಿನಂತಹ ದಿವ್ಯಗನಸನ್ನು ನೆನೆಯುತ್ತಾ, ಮನ್ಮಾನಸ ಸರೋವರದಲ್ಲಿ ಮಿಾಯ್ಯುತ್ತಾ, ಭಾವನಾದೀಪದಲ್ಲಿ ಕವಿ- ಕಿಂಕರನೆಂದು ತಿಳಿಯುತ್ತಾ, ನೆಳಲು ಬೆಳಕಿನಂತಹ ಆಟದಲ್ಲಿ ತಾನು ನಿತ್ಯವೂ ಮಗ್ನ ನಾಗಿರುತ್ತಾನೆ. ಈ ಧುರೀಣರ ಲಾಭ, ನಷ್ಟ, ಕೀಟಲೆ-ಕೋಟಲೆ; ಕೇಡು-ಕುತ್ಸಿತ ಮಾತಿನಿಂದ ಆಗುವುದೇನು? ನಾನು ನೆನೆದ, ನನ್ನ ಜೀವನದಲ್ಲಿ ನೇಯ್ದು ನೆನೆಸಿದಂತಹ ಕನಸಿನ ಕೆಲವು ಭಾಗವನ್ನು ಮುಗಿ ಸಿಯೇ ಜೀವದರ್ಪಣಮಾಡುವೆ” ಎಂದು ಕಾಂತ; ತಾನು ತಿಳಿದಂತಹ ಜೀವನದರ್ಶನದ ತಿರುಳನ್ನು, ಮನೋಧರ್ಮವನ್ನು ಹೇಳಿಕೊಂಡ.

೭

ಸ್ನೇಹಮೋಹದ ಮಧುಸಂಸ್ಕೃತಿಯೆಂದರೆ ಗಂಡೂ ಹೆಣ್ಣಿನ ಕಡೆಯಿಂದ ಒಮ್ಮುಖವಾಗಿ ಬರುವಂತಹ ಬೆಳಕು! ಗಂಡು ಹೆಣ್ಣೆಂದರೆ ಚಂದ್ರಿಕೀಚಂದ್ರಮರಿದ್ದಹಾಗೆಯೆ! ಬೆಳದಿಂಗಳ ಹೊಳೆಯಲ್ಲಿ ನೀರನೀರೆಯರು ಮಾತ್ರವೇ ಮೀಯುತ್ತಾರೆ. ಆ ಮಧುರಾಜ್ಯದ ಆಡಳಿತ ನಡೆಸುತ್ತಾರೆ. ಕಾಂತ ತನ್ನ ನಿತ್ಯದ ಕವಿತಾಮಂದಿರದಲ್ಲಿ ಸಂಧ್ಯಾಜ್ಯೋತಿಯನ್ನು ನೆನೆಯುತ್ತಾ ಕಠೋರವಾದ ಭಯಪ್ರದವಾದ ವಾತಾವರಣದಲ್ಲಿ ತಾನು ಉಳಿದಿರುವನೆಂದುಕೊಂಡಿದ್ದ. ಪರಹಿತವೇ ಜೀವನದ ಗುರಿ. ಸ್ವಾರ್ಥಿಗಳ ಕಾರ್ಯಕ್ಷೇತ್ರ ಮತ್ತು ಮನೋವೈಶಾಲ್ಯ ತೀರ ಚಿಕ್ಕದಾಗಿಯೇ ಇರುತ್ತದೆ. ನನಗೆ, ಅಸಹಕಾರದ ಪ್ರತ್ಯಕ್ಷ ಚಳವಳಿಯಲ್ಲಿ ನಿಂತಿರುವ ನನಗೆ, ಯಾವ ಹೊಸಚೈತನ್ಯವಿದೆ? ಯಾವಜ್ಯೋತಿ ನನ್ನ ಭಾವೀ ಜೀವನವನ್ನು ಬೆಳಗುವುದೆಂದು ಎಣಿಸುತ್ತಿದ್ದ.

ಆದರ್ಶಜೀವಿಗೆ ಹೊಸಸಂದೇಶದಲ್ಲಿ, ಸಂಧಾನದಲ್ಲಿ, ಸುಪ್ರಸಂಗದಲ್ಲಿ ಹೆಚ್ಚುಪ್ರೀತಿ. ಕೊಲೆಗಡುಕ ಒಬ್ಬನನ್ನು ಕೊಲ್ಲುವ ಮೊದಲು ತನ್ನಲ್ಲಿಯ ವಿವೇಕವನ್ನು ಮೊದಲು ಕೊಂದು ಕೊಲ್ಲುವ ಕೆಲಸವನ್ನು ಮುಗಿಸುತ್ತಾನೆ. ಸಮಾಜರಥದ ಸೂತ್ರವನ್ನು ಹಿಡಿದುಕೊಂಡಿರುವ ದಕ್ಷರೂ ಕೂಡ ಹೆಜ್ಜೆ ಹೆಜ್ಜೆಗೂ ಪ್ರಗತಿಯನ್ನು ತಡೆದು ಕಂಟಕರೆನಿಸಿ, ಹುತಾತ್ಮರೆನಿಸಿಕೊಳ್ಳುತ್ತಾರೆ. ನಿಜವಾದ ಬದುಕೆಂದರೆ ಪ್ರೇಮದಿಂದ ಪ್ರೇಮವನ್ನು ಬೆಳಸಿ ಪ್ರೇಮದ ನೆಳಲಿನಲ್ಲಿಯೇ ಬದುಕುವುದಲ್ಲವೆ! ಜೀವನ ನವೋತ್ಸಾಹ ಕಾಣಬೇಕೆಂದಿದ್ದ ಕಾಂತನ ಮುಂದೆ, ಅವನ ಏಕೈಕ ತೇಜಸ್ಸಾಗಿದ್ದ ಅಲಕಾ ಬಂದಳು. ಕವಿ, ಕವಿತಾಮಂದಿರದಲ್ಲಿ ಏಕಚ್ಛತ್ರಾಧಿಪತ್ಯ ಕಟ್ಟಬೇಕೆಂದು ನೆನೆಯುತ್ತಿದ್ದವನು, “ಅಲಕಾ! ಪಿತ್ರಾರ್ಜಿತ ಯಶಸ್ಸು ನಮ್ಮನ್ನು ಒಟ್ಟುಗೂಡಿಸುವುದೋ ಅಥವಾ ನಾವು ಹೀಗೆಯೇ ಉಳಿಯುವಂತೆ ಮಾಡುವುದೋ?” ಎಂದು ಕೇಳಿದ.

“ಒಟ್ಟುಗೂಡಿಸುವುದು, ಹೀಗೆಯೇ ಉಳಿಯುವಂತೆ ಮಾಡುವುದು, ಸಮಾಜ ಸೂತ್ರಧಾರಿಗಳ ಕೈಯಲ್ಲಿದೆ”

“ನಾನು ನನ್ನ ಕನಸಿನ ಏಕಚ್ಛತ್ರಾಧಿಪತ್ಯಕಟ್ಟಲು, ಪ್ರೀತಿಯ

ಸೌಧಕಟ್ಟಲು ನೆನೆಯುತ್ತಲೇ ಇರುವೆನು. ಸೂತ್ರಧಾರಿಗಳ ಕೈ ನಡೆಯಲಿ. ಅಸಹನೆಯ ಮಾತು ಗಾಳಿಯಲ್ಲಿ ತೂರಿಹೋಗಿ, ಆ ಪ್ರವಾಹದಲ್ಲಿಯೇ ಜೊಂಡು ಕಸದಂತೆ ವೈಮನಸ್ಸು ತೇಲಿಹೋಗುವುದು"

"ನಿಮ್ಮ ಕನಸ್ಸಿನ ಏಕಚ್ಛತ್ರಾಧಿಪತ್ಯ ಸ್ಥಾಪನೆಯಾಗುವುದು ಯಾವಾಗ?"

"ನಾವಿಬ್ಬರೂ ಸೇರಿ ಸಂಪ್ರದಾಯಶರಣರನ್ನು ತುಳಿಯಬೇಕು, ಎದುರಿಸಬೇಕು, ಆಗಲೆ ನಾವು ನಿಲ್ಲುವುದು"

"ಬಾಹಿರರಾದ ನಮ್ಮಿಂದಲೇ ಸ್ಥಾಪನೆಯಾಗುವುದು ನಿಶ್ಚಯವೆ? ಉಜ್ವಲ ಪಾತ್ರವನ್ನು ನಾವಿಬ್ಬರೇ ತಾಳಬಹುದೇ?"

"ಅಲಕಾ! ಒಂದು ದೃಷ್ಟಿ, ಪಂಥ ಹೂಡಬೇಕಾದರೆ, ನವಜನ್ಮ ಪ್ರಾಪ್ತಿಯಾಗಬೇಕಾದರೆ; ತಲೆಯೆತ್ತಿ ಎದೆಯುಬ್ಬಿಸಿ ನಿಲ್ಲಬೇಕು. ಆಗ ನಮ್ಮ ಯೋಜನಾಕ್ಷಿತಿಜ ವಿಶಾಲವಾಗುವುದು. ಹೊಸಶಕ್ತಿಯೂ ಕೂಡಿ ಬರುವುದು. ಆಗ ನಾವು ತಲೆಯೆತ್ತಿ ಧೈರ್ಯದಿಂದ ಹೊಸದೃಷ್ಟಿಗೆ, ಹೊಸಬಾಳಿಗೆ, ಹೊಸಜನ್ಮಕ್ಕೆ ಕಾರಣರಾಗುತ್ತೇವೆ" ಎಂದ.

ಕಾಂತನ ಈ ಮಾತುಗಳನ್ನು ಕೇಳಿ, ಸಂಪ್ರದಾಯಕ ದಾವಾಗ್ನಿ ಬೂದಿಯಾಗುವವರೆಗೆ ಯಾವುದೂ ಸಾಧ್ಯವಿಲ್ಲವೆಂದು ಅಲಕಾ ಚರ್ಚೆ ಮಾಡಿದಳು. ಇವಳ ಚರ್ಚೆಗೆ ಉತ್ತರವಾಗಿ ಕಾಂತ ದೀರ್ಘ ಉಪನ್ಯಾಸ ಕೊಡಬೇಕಾಗಿ ಬಂತು.

"ನಿರಭ್ರ ಆಕಾಶದಲ್ಲಿ ಆಕರ್ಷಕ ಕಣ್ಣಿನಂತೆ ಸೂರ್ಯನಿರುತ್ತಾನೆ. ಲೋಕದಲ್ಲಿ ಮೃದುಮಧುರವಾದ ಮುಗುಳುನಗೆಯನ್ನು ನಾವು ಎಲ್ಲೂ ಕಾಣುತ್ತಿರಬೇಕು. ಉಲ್ಲಾಸದ ಝರಿ, ಉಲ್ಲಾಸಪೂರಿತ ಮನಸ್ಸಿನಂತೆ ಹೂಮಂಟಪದಂತೆ ಹಿತವೇ ಅಲ್ಲವೆ! ಶಾಂತಿಯಿಂದ ಸಮೃದ್ಧವಾದುದನ್ನು ಕುರುಡುಕಣ್ಣಿನ ಸಮಾಜ ಸೂತ್ರಧಾರಿಗಳು ನೋಡಿ ಸಹಿಸರಲ್ಲಾ! ಅವರಲ್ಲಿ ಬಹುತೇಕವಾಗಿ ಸ್ವಾತಂತ್ರ್ಯಮಹೋತ್ಸವಕ್ಕೆ ಅಡ್ಡಿಮಾಡುವವರೇ ಹೆಚ್ಚು. ವಿದ್ವೇಷದ ರೌದ್ರತಾಂಡವ ಅವರ ಹೃದಯದಲ್ಲಿ ಆಡುತ್ತಲೇ ಇರುತ್ತದೆ. ಹೃದಯ ದುಃಖಪಕ್ಷಿಯ ಪಂಜರವೇ ಅಲ್ಲ. ಸಮುದ್ರಕ್ಕಿಂತಲೂ ಅಗಾಧ ವಾದ ಪ್ರಯತ್ನ ಮಾನವ ತನ್ನ ಜೀವನದಲ್ಲಿ ಮಾಡಬೇಕಾಗುತ್ತದೆ.

ಸ್ಥಾನಕ್ಕೆ, ಮರ್ಯಾದೆಗೆ ಹೊಡದಾಡಬೇಕಾಗುತ್ತದೆ. ಸಮಾಜದ ರೀತಿ ನೀತಿಗಳೆಂದು ಕಟ್ಟಲೆಗೆ ತಲೆವಾಗಿ ಶರಣಾಗತನಾಗುವವನು ಜೀವನ ಸಮುದ್ರವನ್ನು ಎದುರಿಸಲಾರ. ದುರ್ಘಟನೆಗಳಿಗೆಲ್ಲಾ ಮಾನವನ ತಪ್ಪು ತಿಳಿವಳಿಕೆಯೇ ಕಾರಣವಲ್ಲವೆ?" ಎಂದು ನೀತಿಆದರ್ಶವನ್ನು ವಿವರಿಸುತ್ತಾ ಸಮಾಜದ ಸರ್ವತೋಮುಖ ಬೆಳವಣಿಗೆಯನ್ನು ಪ್ರತಿಪಾದಿಸುತ್ತಾ ನಿಂತ

೮

ನಿರ್ಮಲ ಜಲದ ಸಮೀಪಕ್ಕೆ ಕಾಂತ ಅಲಕಾಯೊಂದಿಗೆ ಬಂದ ನದಿಯದಂಡೆಗೆ ಹೆಂಗೊರಳಿನ ಅಲಕಾ ಪ್ರೇರಕಶಕ್ತಿಯಾಗಿ ಅಲ್ಲಿಗೆ ಬಂದಿದ್ದಳು. ಅವನ ಹೊಸ ಹಾಡಿನಲ್ಲಿ ಏಸಿದೆಯೋ ಎನ್ನುತ್ತ ಬಂದವಳು, ವಾದ್ಯದ ಧ್ವನಿತರಂಗದಂತೆ, ಅವನತಿಗುರಿಯನ್ನು ನೆನೆಯುತ್ತಾ ಲೇಖಕನ ಸಂಕೇತ ಹಿನ್ನೆಲೆಯಂತೆ ಬಂದಿದ್ದಳು. ಕಾಂತ ಮೌನವನ್ನೊಡೆದು "ಅಲಕಾ! ಮುಗ್ಗಟ್ಟಿನಲ್ಲಿ ತೊಳಲುವ ಜೀವಿಗಳಿಗೆ ಸುಂದರನೆಲೆಯಿದೆಯೇನು?" ಎಂದು ಪ್ರಶ್ನೆ ಕೇಳಿದ.

"ಸುಂದರನೆಲೆಯಲ್ಲಿ ಅವರಿಗಿರುವುದು? ಸುಗಮಜೀವನ ನಡೆಸಬೇಕಾದರೆ ಶುದ್ಧ ಅಂತಃಕರಣವೂ ಇರಬೇಕಲ್ಲವೆ?" ಎಂದಳು ಅಲಕಾ.

"ಅಂತಃಕರಣವಿರಬೇಕು, ಸ್ವಾಭಿಮಾನ, ಪ್ರೀತಿ, ವಾತ್ಸಲ್ಯ ಅಂತಃಕರಣದ ನೆಲೆಯಲ್ಲಿ ಬಾಳಬೇಕಲ್ಲವೆ?"

"ಅಂತಃಕರಣ, ಸ್ವಾಭಿಮಾನ, ಈ ಎಲ್ಲಾ ಭಾವನೆಗಳೂ ಮೂಡಿರಬೇಕಾದರೆ ಮುಖ್ಯವಾಗಿ ಜನರು ಸುಸಂಸ್ಕೃತರಾಗಿರಬೇಕಲ್ಲವೆ?"

"ಆಗಿರಬೇಕು, ಆಧ್ಯಾತ್ಮಿಕ ಗರಡಿಯಲ್ಲಿ ಸಾಧನೆಮಾಡಬೇಕು. ವಿಚಾರದ ಒರೆಗಲ್ಲಿಗೆ ತಲೆಕೊಡಬೇಕು, ನ್ಯಾಯಾನ್ಯಾಯ ವಿಮರ್ಶೆ ಮಾಡಿಕೊಳ್ಳಬೇಕು"

"ಎಲ್ಲರೂ ಸಾಧನೆ ನಡೆಸುವುದೆಲ್ಲಿ! ಅವರಿಗೆ ಅಷ್ಟು ಶಕ್ತಿಯಿರುವುದಿಲ್ಲ"

"ಶಕ್ತಿಯೂ ಇರುವುದಿಲ್ಲ, ಹಾದಿಯೂ ಮಾಡಿಕೊಂಡಿರುವುದಿಲ್ಲ"

"ಹಾದಿ? ನಿಮ್ಮದೂ ಒಂದು ಹಾದಿಯಿದೆಯೆ?"

"ಇದೆ! ಮನಸ್ಸು ಸರ್ವಾಂತರ್ಯಾಮಿ ಜೀವನದ ಆರಂಭದಲ್ಲಿಯೇ ಒಂದು ಬಗೆಯ ಆಧ್ಯಾತ್ಮಿಕ ಹಾದಿಹಿಡಿದ ನನಗೆ, ಮತ್ತೇನೂ

ಹಿಡಿಸದ ಹಾಗಾಗಿದೆ"

"ಯಾವುದೂ ಹಿಡಿಸದು ಎಂದಮೇಲೆ, ಮಿಕ್ಕೆಲ್ಲದಕ್ಕೂ ನಿರಾಕರಣೆಯೇ?"

"ಅಲ್ಲವೆ................!"

"ನಮ್ಮ ಜಟಿಲಸಮಸ್ಯೆ ಪರಿಹಾರ ಮಾಡುವೆನೆಂದು ಮಾತು ಕೊಟ್ಟಿರುವುದನ್ನು ಮರೆತಿರುವಿರಾ?" ಎಂದು ಅಲಕಾ ಕೇಳಿಯೇಬಿಟ್ಟಳು.

"ಅಲಕಾ! ನನ್ನ ಆಧ್ಯಾತ್ಮಿಕ ಗುರು ಇತರರ ಕಷ್ಟ ತನ್ನ ಕಷ್ಟವೆಂದು, ಇತರರ ದುಃಖ ತನ್ನ ದುಃಖವೆಂದು, ಇತರರ ಬಂಧನ ತನ್ನ ಬಂಧನವೆಂದು ಮರುಗಿ ನನ್ನ ಎದೆಯಲ್ಲಿ ವಿಶ್ವಕಾರುಣ್ಯದ ಹೊತ್ತಿಗೆಯನ್ನು ಹೊತ್ತಿಸಿದಂತಹ ಮೂರ್ತಿ. ಅವನನ್ನು ನಂಬಿದ ನಾನು ಅನುಸರಿಸುತ್ತ ಬಂದೆ. ಅಭಾಗಿನಿಯ ಮೊರೆಯನ್ನು ತಿಳಿದ ನಾನು ಸಹಾಯಮಾಡಲು ವಚನವಿತ್ತೆ. ಇದು ದಿಟ" ಎಂದು ಅವನು ಒಪ್ಪಿಕೊಂಡ.

"ನೀವು ನಮ್ಮನ್ನು ಭವ್ಯರಂಗಕ್ಕೆ ಮುಟ್ಟಿಸಿ, ತಾಯಿಯ ಮನಸ್ಸಿನ ಕ್ಲೇಷವನ್ನು ಕಡಿಮೆಮಾಡುವುದಾಗಿ ವಚನವಿತ್ತಿರಿ. ನನ್ನ ಬಂಧನ ಎಂದು ಮುಕ್ತಾಯವಾಗುವುದು? ನಾನು ಎಂದು ಸುಖಕ್ಕೆ ದುಡಿಯುವಂತಹ ಜೀವಿಯಾದೇನು? ನಮ್ಮ ಪುನರುದ್ಧಾರ ಈ ನಗರದಲ್ಲಿ ಎಂದಾಗುವುದೊ?" ಎಂದು ಅಲಕಾ ಬಗೆಬಗೆಯ ಪ್ರಶ್ನೆ ಕೇಳಿದಳು.

"ನಿನಗೆ ಬಾಳಿನ ಸವಿಗನಸು ಕಾಣಬೇಕೆಂಬ ಬಯಕೆ ಬಹಳವಾಗಿದೆ. ಮಾದಕ ದ್ರವ್ಯದ ಅಮಲು ನೆತ್ತಿಗೆ ಏರದಿದ್ದರೆ............ಇಂತಹ ವಿಚಿತ್ರಗಳನ್ನು ದೇವರು ಸೃಷ್ಟಿಸಿದನೇ......" ಎಂದು, ಕಾಂತ ನಗೆಯಾಡಿದ. ನಗೆಯಾಟ ಮುಗಿಯಿತು. ಅರ್ಥ ತಿಳಿದುಕೊಂಡ ಅಲಕಾ "ನನ್ನಂತಹ ಅಮಲೇರಿದ ಹೆಣ್ಣನ್ನು ಮಾತ್ರವೇ ದೇವ ಸೃಷ್ಟಿಸಿಲ್ಲ. ತರುಣಿಯರನ್ನು ನಾನಾ ಬಗೆಯಿಂದ ತಮ್ಮ ಕೃತಿಯಲ್ಲಿ ಮನವಾರೆ ಬರೆದಿಟ್ಟಿರುವಂತಹ ಕವಿ-ಕಥೆಗಾರರನ್ನೂ ಅವನು ಸೃಷ್ಟಿಸಿದ್ದಾನೆ" ಎಂದು ಟೀಕೆಮಾಡಿದಳು.

"ಅಲಕಾ ನೀನು ಚಿರ ಯೌವನೆ. ಮನದಲ್ಲಿ ಪ್ರೀತಿ ಔಪಾಸನೆ ನಡೆಸುತ್ತಿದ್ದೀಯೆ! ನಿನ್ನ ಪ್ರತಿಬಿಂಬದ ಬಿಂಬ ಯಾವುದೂ? ಪ್ರೀತಿ ಔಪಾಸನೆ ತೆಗೆದುಕೊಳ್ಳುತ್ತಿರುವ ಮಾನವ ಯಾವನು?"

ಅಲಕಾ ಗಾಢಗಂಭೀರದಲ್ಲಿ ಉಳಿದುಹೋದಳು. ಮಾತುಗಳು ಹೊರಬೀಳಲಿಲ್ಲ. ಅನಂತರೂಪಿತೆಯಾದ ಅಲಕಾ ಸಮುದ್ರದಲೆಯಂತೆ ಈ ವರೆಗೆ ಉಬ್ಬಿಹೊರಳಿ, ನಗೆಯಾಟವಾಡಿ, ಟೀಕಿಸುತ್ತಿದ್ದವಳು ಮೌನ ದಿಂದೇಕೆ ಕುಳಿತಳು? ಕಾಂತನ ಪ್ರಶ್ನೆಗೆ–ನೇರವಾದ ಪ್ರಶ್ನೆಗೆ ಉತ್ತರ ಯಾವುದು? ಆದರೂ ಅಲಕಾ ಬಾಯಿಂದಲೇ ಅವಳ ಮನೋಗತ ತಿಳಿಯ ಬೇಕೆಂದಿದ್ದ ಕಾಂತ "ನಿನ್ನನ್ನು ಸುಖಸಂತೋಷಗೊಳಿಸಿ, ಸುಮಧುರ ಜೀವನದಲ್ಲಿ ನಡೆಸಿಕೊಂಡುಬರುವಂತಹ ನಿನ್ನ ಪ್ರೇಮಿ ಯಾರಿರುವನು? ಎಂದು ಮತ್ತೊಮ್ಮೆ ಕೇಳಿಬಿಟ್ಟ. ಅಲಕಾ ಉತ್ತರವೀಯಲೇ ಇಲ್ಲ. ಇವಳ ಹೃದಯರಾಗವನ್ನು ಒಲುಮೆಯಿಂದ ಬಂಧಿಸಿದ್ದಾಗಿದೆ. ಇವಳ ಬಾಯಿಂದಲೇ ಒಪ್ಪಿಗೆಯನ್ನು ಹೊರಗೆಡಹಬೇಕೆಂದು ಕಾಂತ "ಅಲಕಾ! ಅಮೃತಯೋಗದಂತಹ ನಿನ್ನ ಬಾಳಪಥದಲ್ಲಿ ನಿಂತ ರಥ ಯಾವುದಿದೆ?" ಎಂದು ಕೇಳಿ ಮಾತನಾಡುವಂತೆ ಒತ್ತಾಯಪಡಿಸಿದ.

"ನೀವು ನಮಗೆ ಹೆಮ್ಮರದ ನೆಳಲಿನಲ್ಲಿ ನಿಲ್ಲಲು ಆಸ್ಪದವಿತ್ತಿದ್ದೀರಿ, ಮಾನ್ಯರಾಗಿದ್ದೀರಿ, ಇನ್ನು ನನ್ನ ಬಾಳರಥ ಯಾವುದಿದೆಂದು ತಿಳಿಯಲಿ" ಎಂದಳು.

"ಅಲಕಾ! ಬಾಳರಥವೆಂದರೆ ಒಲುಮೆಯ ಮುಡಿಪು, ಮುಂಜಾನೆ ಕೋಳಿ ಕೂಗೆಬ್ಬಿಸಿ ನಸುಕನ್ನೆಚ್ಚರಿಸುವುದಿಲ್ಲವೆ? ಹಾಗೆಯೇ ಪ್ರೇಮವೂ ಆತ್ಮದೃಷ್ಟಿಯ ಜೀವದೊಲವು"

"ನೀವೂ ಒಬ್ಬರು ಪ್ರೇಮಾರಾಧಕರಲ್ಲವೆ!"

"ಪ್ರೇಮಾರಾಧಕನೆ! ಹೃದಯದಲ್ಲಿ ಪ್ರೇಮವೇ ನಿಜವಾದ ದೇವರು!"

"ಹೃದಯಮಂದಿರದಲ್ಲಿ ಪ್ರೇಮ ದೇವರು ನಿಜ........ಯಾವುದೋ ಭಾವನೆಗೆ ಮೈಮನಸ್ಸು ಕೊಟ್ಟಿದ್ದೇನೆ"

"ನೀನು ಮನಸ್ಸುಮಾಡಿರುವುದು, ಅದು ಹೊರಳಿರುವುದು ನಿಜ. ಶೂನ್ಯರಾಜ್ಯದ ಅರಸು ನಾನು. ನನ್ನ ಸ್ಥಿರ ಆಸ್ತಿಯೆಂದರೆ ಏನೂ ಇಲ್ಲ. ಪುರಸ್ಕಾರ, ಸಹಾನುಭೂತಿಯಿಲ್ಲದವನನ್ನು ಏಕೆ?............"

"ಪ್ರೇಮದ ವಿಚಾರ ಹೆಚ್ಚಾಗಿ ಬರೆದಿರುವ ನಿಮಗೆ ಏನು ಹೇಳುವುದು.?"

ಕಾಂತ ಮತ್ತೊಂದು ವಿಚಾರವಿದೆಯೆಂದು ಸೂಚಿಸಿದ "ಯಾವ ಮಾತು" ಎಂದು ಅಲಕಾ ಕೇಳಿದಳು.

"ನೀನು ಮತ್ತು ನಿನ್ನ ಪ್ರೇಮದ ವಿಚಾರಮನೋರಂಗವನ್ನು ತಾಯಿ ತಿಳಿದಿರುವರೇನು?" ಎಂದು ಕೇಳಿದ. ಪ್ರೇಮಿಸಲು ಅಧಿಕಾರ ಪಡೆದವಳಂತೆ ಅಲಕಾ ಹಿಗ್ಗುತ್ತಿದ್ದಳಷ್ಟೆ. "ಪ್ರೇಮಿಸಲು ಅನುಮತಿ ಪಡೆಯಬೇಕೆ?" ಎಂದು ಪ್ರತಿಯಾಗಿ ವಾದಹೂಡಿದಳು.

ಪ್ರತಿಯಾಗಿ ಕಾಂತ "ಅಲಕಾ! ನಮ್ಮ ವ್ಯಕ್ತಿತ್ವ ಮುಗಿಲು ಮುಟ್ಟುವಷ್ಟಾಗಬೇಕು. ಮಹಾಕಾವ್ಯ ಹೇಗೋ ಜೀವನವೂ ಒಂದು ಕಾವ್ಯ. ದಿವಿಜಪುರದಲ್ಲಿ ನಮ್ಮ ವ್ಯಕ್ತಿತ್ವವನ್ನು ಕೊಲೆಮಾಡಿಬಿಟ್ಟದ್ದಾರೆ. ನಾವು ನಮ್ಮ ಸಂಯಮವನ್ನು, ದೃಢಚಿತ್ತವನ್ನು, ಆಧ್ಯಾತ್ಮಿಕ ಶಕ್ತಿಯನ್ನು ಕಳೆದುಕೊಂಡಿಲ್ಲ. ದೇಶದಸುಖಕ್ಕಿಂತ ದೇಹದಸುಖ ಹೆಚ್ಚಿನದೆಂದು ನಾನು ಭಾವಿಸಿಯೇ ಇಲ್ಲ. ಜೀವ ತನ್ನ ಇಡೀ ಬಾಳಿನಲ್ಲಿ ಒಂದು ಮಹಾತ್ಯಾಗ ಮಾಡಲೇಬೇಕು. ತ್ಯಾಗವಿಲ್ಲದೆ ಸಾಧನೆಯಿಲ್ಲ. ಸತ್ಯದ ಧ್ರುವತಾರೆಯಾಗಿ, ನನ್ನ ಪ್ರೇಮಪೂರಿತ ಗ್ರಂಥಾವಳಿ ಧ್ರುವತಾರೆಯಾಗಿ ಬೆಳಗಬೇಕೆನ್ನುತ್ತಿದ್ದೀಯೆ. ನಿನ್ನ ಮನಸ್ಸಿನಂತೆ ನಡೆದುಹೋಗಲಿ" ಎಂದ.

"ನನ್ನ ಭಾಗ್ಯ ಬಯಲಾಗಲಿಲ್ಲ, ಸ್ನೇಹಯೋಗ ಕೂಡಿಕೊಂಡಿತು" ಎಂದು ಅಲಕಾ ಕಾಂತನ ಮಾತನ್ನು ಕೇಳಿ ಆನಂದಪರವಶಳಾದಳು.

೯

ಸಾಮಾನ್ಯವಾಗಿ ಕಾದಂಬರಿಕಾರರು ತಮ್ಮ ಕಥಾಚಿತ್ರದಲ್ಲಿ ಆರಿಸಿಕೊಳ್ಳುವ ನಾಯಕ ನಾಯಕಿಯರನ್ನು ತಮ್ಮ ಸ್ನೇಹಿತರ ಗುಂಪಿನಿಂದಲೋ ಅಥವಾ ಬಂಧು ಸಮೂಹದಿಂದಲೋ ಆರಿಸಿಕೊಳ್ಳುತ್ತಾರೆ. ಹೀಗೆ ಆರಿಸಿಕೊಂಡಂತಹ ವ್ಯಕ್ತಿಗಳ ಪ್ರತಿಛಾಯೆಯೇ ಅವರು ರಚಿಸಿದಂತಹ ಕಾದಂಬರಿಯಲ್ಲಿ ರೂಪಗೊಂಡಿರುತ್ತದೆ. ಕಲಾವಿದರು, ನಟರು, ಚಿತ್ರಗಾರರು ಇವರು ತಮ್ಮ ಕಲಾರೂಪಕದಲ್ಲಿ ತಮಗೆ ರುಚಿಸಿದಂತಹ ವ್ಯಕ್ತಿಗಳನ್ನೇ ಚಿತ್ರಿಸುತ್ತಾರೆಂದಮೇಲೆ ಕವಿ ಕಾಂತ ಬೇರೆಯುವನಾಗುವನೇನು? ಅವನ ಭಾಗ್ಯಶಕ್ತಿಯಾಗಿ, ತತ್ವಪ್ರಣಾಲಿನಿಯಾಗಿ, ಜ್ಯೋತಿರ್ಮಯ ತಾಪಸಿಯಾಗಿ

ನಿಂತಿದ್ದ ಅಲಕಾ ಮತ್ತು ಅವಳು ನೆನೆಯುತ್ತಾ ಸ್ವಾತಂತ್ರ್ಯಮಂತ್ರ ಜಪಿಸುತ್ತಾಯಿದ್ದುದನ್ನು ತಿಳಿದು ಕಾಂತ, ಅವಳ ಕೈಹಿಡಿಯಲು ತಾನು ಸಿದ್ಧನಾಗಿರುವುದನ್ನು ತಿಳಿಸಿದ.

ಕಾಂತ ತಾನು ನಡೆಸುತ್ತಿದ್ದ ಮುಂದೆ ನಡೆಸಬೇಕಾಗಿದ್ದ ಜೀವನ ಯಾತ್ರೆಯನ್ನು ವಿಮರ್ಶೆಮಾಡಿಕೊಳ್ಳಲಾರಂಭಿಸಿದ. ಅನಂತ ಚಿರನಿದ್ರೆ ಯಲ್ಲಿ ಕವಿ ಮುಳುಗಿ ತನ್ಮಯನಾಗಿರುವಾಗ, ಸಮಾಜಸಂಸ್ಥೆ; ಕವಿಯ ಮನೋನಿಶ್ಚಯ ತಿಳಿಯದೆ ಅಪಪ್ರಚಾರ ಮಾಡುತ್ತಲೇ ಇರುತ್ತದೆ. ಕಲಾಪ್ರಪಂಚಕ್ಕೂ, ವಾಙ್ಮಯಪ್ರಪಂಚಕ್ಕೂ ಇರುವ ಸಂಬಂಧದಹಾಗೆ, ಭಾವನಾಜೀವಿಗೂ ಸಾಮಾನ್ಯಪ್ರಪಂಚಕ್ಕೂ ಇರುವುದಿಲ್ಲ. ಈ ತತ್ವ ತಿಳಿದಿದ್ದ ಕಾಂತ, ಭಿನ್ನಭಾವಗಳನ್ನು; ರೂಪಾಂತರಗಳನ್ನು ನೆನೆಯು ತ್ತಲೇ ಚಂದ್ರಿಕೆಯನ್ನು ಕಂಡ. ಹೃದಯದಲ್ಲಿ ಶಾಂತಿ, ಮನದಲ್ಲಿ ಉತ್ಸಾಹ ತುಂಬಿತ್ತು. ಚಂದ್ರಿಕೆಯನ್ನು ಕಂಡು "ತಾಯಿ! ಆತ್ಮಕ್ಕೂ, ತತ್ವಕ್ಕೂ ನಾಶವಿಲ್ಲ; ಇವಕ್ಕೆ ನಾಶವನ್ನು ಕೋರಬಾರದಲ್ಲವೆ?" ಎಂದು ಕೇಳಿದ.

ಕಾಂತನ ಮನಸ್ಸು, ಅವನ ಒಳಮನಸ್ಸಿನಲ್ಲಿ ನಡೆಯುತ್ತಿದ್ದ ಹೊಯ್ದಾಟವನ್ನು ಕಂಡುಕೊಂಡಿದ್ದ ಚಂದ್ರಿಕೆ "ಕಗ್ಗತ್ತಲೆಯಲ್ಲಿ ಕಲೆಯ ಸೊಬಗನ್ನು ಕಾಣಲು ಸಾಧ್ಯವೇನು? ಆತ್ಮತತ್ವದ ಉದ್ಧಾರ ಸುಲಭವಾಗಿ ಆಗಲಾರದು. ನಿಜವಾದ ಪೋಷಣೆ ನಡೆದು, ಉದ್ಧಾರವಾಗುತ್ತಿದೆಯೆಂಬ ಸೂಚನೆ ತೋರಿಬಂದಾಗಲೇ ಆಗುವುದು" ಎಂದಳು.

ಕಾಂತ "ನಾನು ಆತ್ಮಶಕ್ತಿಯಿಂದ ಆತ್ಮವಿಶ್ವಾಸಗಳಿಸಿಕೊಂಡಿರುವೆ" ಎಂದು ಹೆಮ್ಮೆಯಿಂದ ಮಾತನಾಡಿದ.

"ಹೌದು! ಹೌದು! ಕಲಾವಿದರು ಮಹಾವಿಭೂತಿಗಳು. ಸೌಂದ ರ್ಯದ ಉಗಮವೇ ಅವರ ಕಲೆ. ನುಡಿಗಾಗಿ, ಕಲೆಗಾಗಿ ಅವರು ಹೋರಾಟನಡೆಸುವುರು ಎಂಬುದನ್ನು ಬಲ್ಲೆ! ನಿನ್ನದು ಅದೆಂತಹ ತತ್ವ? ಆತ್ಮಶಕ್ತಿ ನಿನಗೆ ದೊರೆಕಿದೆಯೇ" ಎಂದು ಚಂದ್ರಿಕೆ ಕೇಳಿದಳು.

ಕಾಂತ, ಅಲಕೆಯೊಡನೆ ಮಾತನಾಡಿದುದನ್ನು ಮತ್ತು ಇವರಿಬ್ಬರೂ ಚಂದ್ರಿಕೆಯ ಮನಸ್ಸು ತಿಳಿದು, ವರ್ತಿಸಲು ಸಿದ್ಧರಾಗಿರುವ ಸಂಗತಿಯನ್ನು ಬಿಚ್ಚಿ ಹೇಳಿದ. ತಾನೇ ಮುಂದೆ ದಿವಿಜಪುರದಲ್ಲಿ ಜಾಗೃತಿಯನ್ನೆಬ್ಬಿಸಿ,

ತನ್ನ ಸಾಧನೆಯಿಂದಲೇ ಜಯಭೇರಿ ಮೊಳಗಿಸಬೇಕೆಂದಿರುವ ಯೋಜನೆಯನ್ನು ಸಮಾಧಾನದಿಂದ ಹೇಳಿದ.

ಚಂದ್ರಿಕೆ ಒಮ್ಮೆಲೇ ಚಕಿತಳಾಗದೆ “ ಕೊರಳು ಕೊಯ್ಯುತ್ತಿರುವಾಗ ಕೊಯ್ಯುವವರನ್ನು ನಗುಮುಖದಿಂದಲೇ ಕಾಣಬೇಕೆನ್ನುವವರ ಗುಂಪಿನವ ನೀನೆಂದು ಕಾಣುವುದು. ತತ್ವವನ್ನೇ ನೆನೆದು ನಡೆಯಬೇಕೆಂದಿರುವ ನೀನು, ನಮ್ಮನ್ನು ಯಾವ ಪಥದಲ್ಲಿ ಒಯ್ಯಬೇಕೆಂದಿರುವೆ ” ಎಂದು ಆತುರದಿಂದ ಕಾಂತನನ್ನು ಕೇಳಿದಳು.

ಚಂದ್ರಿಕೆ ಹೇಳುವುದನ್ನೇ ನೋಡುತ್ತಾ ನಿಂತಿದ್ದ ಕಾಂತ “ ಹೃದಯ ಹೀನರೂ ಪೈಶಾಚವೃತ್ತಿಯವರೂ ಆಗಿರುವ ಪುರವಾಸಿಗಳ ಕೈಗೆ, ಅಲಕಾ ಸಿಗಬಾರದೆಂದು ನಾನೇ ಅವಳ ಕೈಹಿಡಿದು ರಕ್ಷಿಸಲು ಸಿದ್ಧನಾಗಿರುವೆ ” ಎಂದು ಮುಗಿಸಿಬಿಟ್ಟ. ಚಂದ್ರಿಕೆ ದಿಙ್ಮೂಢಳಾಗಿ ಹೋದಳು. ಪ್ರಭಾತ ಕಾಲದ ಪಕ್ಷಿಗಳು ಮಂಜುಳಗೀತೆದೊಡನೆ ಆನಂದದ ಜಯಘೋಷ ಮಾಡುವಂತೆ, ಸಮೀಪದಲ್ಲಿಯೇ ನಿಂತಿದ್ದ ಅಲಕಾ ತಾನು ಇನ್ನು ಉಜ್ವಲ ಇತಿಹಾಸ ಕಾಣುವುದು ನಿಜವೆನ್ನುತ್ತಾ ತೋರುತ್ತಾ ಚಂದ್ರಿಕೆಯ ಹತ್ತಿರಕ್ಕೆ ಬಂದು ನಿಂತಳು.

ಚಂದ್ರಿಕೆ ಇನ್ನು ಏನು ಹೇಳುವುದು ! ತಮ್ಮ ಪಾಲಿನ ಕೆಲಸ ಮುಗಿಯಿತೆಂದು ಕಾಂತಾ - ಅಲಕಾ ದೂರ ಹೊರಟುಹೋದಮೇಲೆ, ಚಂದ್ರಿಕೆ ಇವರಿಬ್ಬರೂ ನನ್ನ ಅಭಿಮತ ತಿಳಿಯಲು ಹಾದಿ ನೋಡುತ್ತಿರುವಂತಿದೆ, ಆಕಾಶವೆಷ್ಟು ವೈಶಾಲ್ಯವೋ ಅಷ್ಟೇ ಕಾಂತನ ಹೃದಯವೂ ವಿಶಾಲವಾಗಿದೆ. ದೀನದುಃಖಿಯಾದ ನನ್ನ ಉದ್ಧಾರವಾದಂತೆಯೇ ಆಯಿತು. ಇವರಿಬ್ಬರ ಆನಂದೋದಯದಫಲ ಫಲಿಸಲಿಯೆಂದು ಅಭಿವಂದಿಸಿದಳು.

## ೧೦

ಪ್ರೀತಿಯ ಮೈತ್ರಿ, ಪೂರ್ಣಬಾಳಿನ ಮೈತ್ರಿ, ಫಲಿಸಲಿ. ಯಾವ ವ್ಯಕ್ತಿದ್ವೇಷಕ್ಕೂ ಬಲಿಯಾಗದೆ ಬಾಳಲಿ ಎಂದು, ಅಲಕಾ-ಕಾಂತನ ಚಿಂತನೆ ಮಾಡುತ್ತಿದ್ದ ಚಂದ್ರಿಕೆ ; ದಿವಿಜಪುರದ ಕಲುಷಿತ ಜನರ ಹೃದಯವನ್ನು ಕರುಣಾಳು ಶುಚಿಮಾಡಲಿ, ತನ್ನ ಜನರನ್ನು ಅವರೆಲ್ಲಾ ಕರುಣ ದೃಷ್ಟಿಯಿಂದ ಕಾಣಲಿ ಎಂದು ಮೊರೆಯಿಟ್ಟಳು.

"ನೀನು ನಮ್ಮ ಸಂಕೋಲೆ ಕಳಚಿ, ಬಿಡುಗಡೆಮಾಡಿರುವೆ, ದೃಢ ಬಾಹುವಿನಿಂದ ರಕ್ಷಿಸಲು ವಚನಕೊಟ್ಟಿರುವೆ. ನಿನ್ನ ನಿಶ್ಚಯ, ಕೆಚ್ಚಿದೆ, ಮಹೋದ್ದೇಶ ನನಗೆ ಛನ್ನಾಗಿ ತಿಳಿದಿದೆ" ಎಂದು ಚಂದ್ರಿಕೆ, ಅಲಕೆಗೆ ಹೇಳುತ್ತಾ "ಅಲಕಾ! ನಿನ್ನನ್ನು ಉದ್ಧರಿಸಿದ ನಾಥನ ಹೃದಯದಲ್ಲಿ ಎಷ್ಟು ಮಿದುತನವಿದೆಯೋ ಅಷ್ಟೇ ಬಾಹುಗಳಲ್ಲಿ ಶಕ್ತಿಯೂ ಇದೆ. ನಮಗೆ ಯಾರೂ ಹಿತಕೋರಲಿಲ್ಲ. ನಿನ್ನ ಹಿತಚಿಂತನೆಯ ಭಾರ ಇನ್ನು ಈ ಲೋಕಮಾನ್ಯನ ಕೈಯಲ್ಲಿದೆ. ನಿನ್ನ ಸಮಸ್ಯೆ—ಹತ್ತೂ ಕಡೆ ಸುತ್ತು ಕೊಂಡಿರುವ ಸಮಸ್ಯೆ ಪರಿಹಾರವಾದಂತೆಯೆ. ನಮ್ಮನ್ನು ಎಲ್ಲಾ ಕುತ್ತಿನಿಂದ ಪಾರುಮಾಡಿದ ಸುಲಲಿತ ನಿನ್ನ ಮನೋವಲ್ಲಭನನ್ನು ಇನ್ನು ನೀನು ಅನುಸರಿಸು" ಎಂದು ಕೈತೋರಿ ಮಂತ್ರಘೋಷಣೆ ಮಾಡಿದಂತೆ ಅಲಕೆಗೆ ಹೇಳಿ ಮುಗಿಸಿದಳು.

ಕಾಂತ ಕೊನೆಯದಾಗಿ ಇಬ್ಬರ ಮುಂದೆ "ಅಗ್ನಿಭಕ್ಷಕರಿಂದ ತಪ್ಪಿಸಿ ಕೊಳ್ಳಲು ನಮಗೆ ದಾರಿ ಇರಲಿಲ್ಲ. ನಾವೆಲ್ಲಾ ದಾರಿಗಾಣದೆ ತುಂಬಿಬಂದ ದುಃಖವನ್ನು ಸಹಿಸಿ ಮೊರೆಯಿಡುತ್ತಿದ್ದೆವು. ದಿವಿಜಪುರದ ನಿಸರ್ಗತಾಯಿ ಮಡಲಲ್ಲಿ ಬೆಳೆದು ರಾರಾಜಿಸುತ್ತಿರುವ ಮತ್ತು ಕನಸಿನ ಕುಸುಮಮಾಲೆಯನ್ನು ನೆನೆಯುತ್ತಿರುವ ನನಗೂ ಉಳಿಗಾಲವಿಲ್ಲದಂತಾಗಿ ಹೋಯಿತು. ನವನವೋನ್ಮೇಷಶಾಲಿನಿಯೆಂದರೆ ಹೆಣ್ಣು. ಪ್ರೇಮ ಅನಿರ್ವಚನೀಯವಾದ ಆನಂದ. ಹೆಣ್ಣೆಂದರೆ, ಅಸಾಯಕ ದುರ್ಬಲ ಚಿಹ್ನೆಯೆಂದು ಜನರು ಗುರಿತಿಸುತ್ತಾರೆ. ಹೃದಯದ ಕಡಲು ತುಂಬಿಕೊಂಡು, ನಮ್ಮಂತಹ ಜನರು ನಿಂತಾಗ ಬೀಳುಜನರನ್ನು ನೋಡಬಯಸಲು ಯಾರೂ ಸಿದ್ಧರಾಗಿರುವುದಿಲ್ಲ. ನಮ್ಮ ಜೀವನನಾಟಕ ರುದ್ರನಾಟಕದಲ್ಲಿಯೇ ಮುಗಿಯ ಬೇಕೆಂಬ ಕಾಂಕ್ಷೆ ಹಲವರಿಗಿದೆ. ನಮ್ಮದೋ, ಸಂಪದ್ಯುಕ್ತವಾಗಿ ಮುಗಿಯ ಬೇಕೆಂಬ ಹಂಬಲವಾಗಿದೆ. ಎಷ್ಟು ಜನ ಎಷ್ಟು ವಿಧವಾಗಿ ವಂಚಿದರೆ ನಮ್ಮ ಧ್ಯೇಯ ಸಡಲೀತು? ಇನ್ನು ನಾನು-ನೀನು ನೆನೆಯುವುದು ರಸವಾಣಿಯನ್ನೇ ಖಂಡಿತ. ಒಂದು ಸಾರಿ ಅಥವಾ ಧ್ಯೇಯ ಪುನರುದ್ಧಾರ ವಾಗಬೇಕಾದರೆ ಮೊದಲು ಶಕ್ತಿವಂತನಾದ ಮುಖಂಡನೇ ದಾರಿತೋರ ಬೇಕಲ್ಲವೆ? ನಮಗೆ, ಊರಿನವರ ಅನುಗ್ರಹ ದೊರೆಯದು; ದ್ವೀಪದ

ಅನುಗ್ರಹ ನಿಶ್ಚಯವಾಗಿಯೂ ದೊರೆಯುವುದು ಎಂದು ಭರವಸೆಯಿಂದಲೇ ಮುಂದುವರಿಯೋಣ. ಭವಿಷ್ಯಜೀವನ ನಡೆದಾಗ ಚೆನ್ನುಡಿಯೂ ಹೊರ ಬೀಳುತ್ತದೆ. ಸಮಾಜ ಧುರೀಣರೂ ಆಗ ದಾರಿಗೆ ಬರಬಹುದು. ಆಗ ಆಶೆಯೆಂಬ ಬಾಂಧವ್ಯ ಬೆಳಗಿ ಬಂದು; ನೆರಳಾಗಿ ನಿಂತು, ಜೀವವನ್ನು ಆಲಂಗಿಸಿ ಸ್ವಾಗತವೀಯುತ್ತದೆ" ಎಂದ.

ಕಾಂತನ ಭಾವಾವೇಷದ ಮಾತು ಮುಗಿಯಿತು. ನನ್ನ ಮತ್ತು ನಿಮ್ಮ ಆಶೋತ್ತರ ವೈವಿಧ್ಯದಿಂದ ಕೂಡಿಕೊಳ್ಳುವುದು, ನಾನು ನಿಮ್ಮ ನೆರಳಾಗಿ ನಿಂತುಕೊಳ್ಳುವೆ ಎಂದು, ಅಲಕಾ ನೆನೆಯುತ್ತಾ ನಿಂತಳು. ಶಾಂತಿಪುರುಷ ಕಾಂತ, ಅವನೊಂದಿಗೆ ಮುಗ್ಧ ಕನ್ಯೆ ಅಲಕಾ ನಿಂತಿರು ವುದನ್ನು ನೆನೆಯುತ್ತಾ ವೃದ್ಧೆ ಚಂದ್ರಿಕೆ ಭಾವ ಎರಕದ ಹೊಯ್ದಾಟ ತೇಜೋಶಕ್ತಿಯನ್ನು ಕಂಡಳು. ಅವಳ ಕಣ್ಣುಗಳಲ್ಲಿ ಜಲಬಿಂದುಗಳು ಆಗ ಸ್ಥಿರವಾಗಿ ಕಂಡವು.



ಭಾರತೀ ಮುದ್ರಣಾಲಯ, ಗೊಲ್ಲರಪೇಟೆ, ಬೆಂಗಳೂರು ಸಿಟಿ.

# ಆ ಲಾ ಪ ನೆ.

(ಸಚಿತ್ರ ಕವನ ಸಂಗ್ರಹ)

ಶ್ರೀ ಧನ್ವಂತರ ಹಲವು ಕವನ ಸಂಗ್ರಹಗಳಿಂದ ಈ ಗ್ರಂಥ ಶೋಭಿಸುತ್ತದೆ. ಒಂದೊಂದು ಕವನದ ಹೃದಯವನ್ನೂ ವ್ಯಕ್ತವಾಗಿ ವರ್ಣಿಸುವಂತಹ ಒಂದು ಸುಂದರ ಚಿತ್ರವು ಪುಸ್ತಕದ ಅಂದವನ್ನು ಹೆಚ್ಚಿಸುವಂತಿದೆ. ಕವನಗಳು ಹಲವು ನೂತನ ಛಂದಸ್ಸುಗಳಲ್ಲಿ ರಚಿತವಾಗಿ ಓದುಗರ ಕುತೂಹಲವನ್ನು ಹೆಚ್ಚಿಸುವಂತಿವೆ.

**ಬೆಲೆ: ಎಂಟಾಣೆ.**

**ಎಚ್. ಎಸ್. ರಾವ್ ಬ್ರದರ್ಸ್,**
ಬೆಂಗಳೂರು ನಗರ.